ಎಲ್. ಬಸವರಾಜು ಅವರು ಸಂಪಾದಿಸಿದ

# ಶಿವದಾಸ ಗೀತಾಂಜಲಿ : ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪ್ರಸ್ತುತಪಡಿಸಿದ ಎಂ.ಫಿಲ್. ನಿಬಂಧ


ಸಂಶೋಧಕರು

ಶರಣಬಸವ ಜಿ.ಎಂ.

ಮಾರ್ಗದರ್ಶಕರು

ಡಾ. ಎಸ್.ಆರ್. ಚನ್ನವೀರಪ್ಪ

ಹಿರಿಯಶ್ರೇಣಿ ಅಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ





ಭಾಷಾ ನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

ಎಲ್. ಬಸವರಾಜು ಅವರು ಸಂಪಾದಿಸಿದ

# ಶಿವದಾಸ ಗೀತಾಂಜಲಿ : ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪ್ರಸ್ತುತಪಡಿಸಿದ ಎಂ.ಫಿಲ್. ನಿಬಂಧ


ಸಂಶೋಧಕರು

**ಶರಣಬಸವ ಜಿ.ಎಂ.**





ಮಾರ್ಗದರ್ಶಕರು

**ಡಾ. ಎಸ್.ಆರ್. ಚನ್ನವೀರಪ್ಪ**

ಹಿರಿಯಶ್ರೇಣಿ ಅಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ





ಭಾಷಾ ನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ದೃಢೀಕರಣ ಪತ್ರ

ಎಲ್. ಬಸವರಾಜು ಅವರು ಸಂಪಾದಿಸಿದ 'ಶಿವದಾಸ ಗೀತಾಂಜಲಿ : ಒಂದು ಅಧ್ಯಯನ' ಎಂಬ ಶೀರ್ಷಿಕೆಯ ನಿಬಂಧವನ್ನು ಶ್ರೀ ಶರಣಬಸವ ಜಿ.ಎಂ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಈ ನಿಬಂಧವನ್ನು ಅಥವಾ ಇದರ ಇತರೆ ಭಾಗಗಳನ್ನು ಯಾವುದೇ ಪದವಿಗೆ ಅವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 31-7-07
ಸ್ಥಳ : ವಿದ್ಯಾರಣ್ಯ

(ಡಾ. ಎಸ್.ಆರ್. ಚನ್ನವೀರಪ್ಪ)
ಹಿ.ಶ್ರೇ. ಅಧ್ಯಾಪಕರು ಮತ್ತು ಮಾರ್ಗದರ್ಶಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

ಎಲ್. ಬಸವರಾಜು ಅವರು ಸಂಪಾದಿಸಿದ 'ಶಿವದಾಸ ಗೀತಾಂಜಲಿ : ಒಂದು ಅಧ್ಯಯನ' ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಎಸ್.ಆರ್. ಚನ್ನವೀರಪ್ಪ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ : 31-07-07
ಸ್ಥಳ : ವಿದ್ಯಾರಣ್ಯ

(ಶರಣಬಸವ ಜಿ.ಎಂ.)
ಎಂ.ಫಿಲ್. ಸಂಶೋಧನ ವಿದ್ಯಾರ್ಥಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಕೃತಜ್ಞತೆಗಳು

ನನ್ನ ಎಂ.ಫಿಲ್., ನಿಬಂಧಕ್ಕೆ ಆರಂಭದಲ್ಲಿ ಶಿವದಾಸ ಗೀತಾಂಜಲಿಯನ್ನು ಮೂಲ ಪಠ್ಯವನ್ನಾಗಿ ಆಯ್ದುಕೊಳ್ಳಲು, ಒಪ್ಪುಗೆಗಾಗಿ ಎಲ್. ಬಸವರಾಜು ಅವರನ್ನು ಕೇಳಿಕೊಂಡಾಗ, ತುಂಬು ಹೃದಯದಿಂದ ಒಪ್ಪಿಗೆ ಸೂಚಿಸಿ, ಅಧ್ಯಯನದುದ್ದಕ್ಕೂ ಮಾರ್ಗದರ್ಶನವನ್ನು ನೀಡುತ್ತಾ ನನ್ನನ್ನು ಆರ್ಶೀವಾದಿಸಿದ ಶ್ರೀಯುತ ಎಲ್. ಬಸವರಾಜು ಅವರಿಗೆ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ.

ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಎಂ.ಫಿಲ್. ನಿಬಂಧವನ್ನು ರಚಿಸಲು ಅವಕಾಶ ಮಾಡಿಕೊಟ್ಟ ಅಂದಿನ ಕುಲಪತಿಗಳಾದ ಡಾ.ಬಿ.ಎ. ವಿವೇಕ ರೈ, ಇಂದಿನ ಪ್ರಭಾರಿ ಕುಲಪತಿಗಳಾದ ಡಾ.ಕೆ.ವಿ. ನಾರಾಯಣ, ಕುಲಸಚಿವರಾದ ಶ್ರೀ ಕೆ. ಶಂಕರ, ಅಧ್ಯಯನಾಂಗದ ಅಂದಿನ ನಿರ್ದೇಶಕರಾದ ಡಾ.ಟಿ.ಆರ್. ಚಂದ್ರಶೇಖರ, ಇಂದಿನ ನಿರ್ದೇಶಕರಾದ ಡಾ. ಪಾಂಡುರಂಗಬಾಬು, ಭಾಷಾನಿಕಾಯ ಡೀನ್‌ರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರುಗಳಿಗೆ ತುಂಬು ಹೃದಯದ ನಮನಗಳು.

ಅಧ್ಯಯನದುದ್ದಕ್ಕೂ ಪೂರಕವಾದ ಮಾಹಿತಿ, ಮಾರ್ಗದರ್ಶನ ಮಾಡಿದ ನನ್ನ ಗುರುಗಳಾದ ಡಾ.ಎಸ್.ಆರ್. ಚೆನ್ನವೀರಪ್ಪ ಅವರಿಗೆ ತುಂಬು ಮನಸ್ಸಿನ ಕೃತಜ್ಞತೆಗಳು. ಹಸ್ತಪ್ರತಿ ಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ.ಎಸ್.ಎಸ್. ಅಂಗಡಿ, ಡಾ.ಕೆ. ರವೀಂದ್ರನಾಥ, ಡಾ.ಎಫ್.ಟಿ. ಹಳ್ಳಿಕೇರಿ, ಡಾ. ವೀರೇಶ ಬಡಿಗೇರ್ ಹಾಗೂ ಪ್ರೀತಿಯಿಂದ ಕಂಡ ರಾಮನಾಯ್ಕ, ಈರಪ್ಪ, ಸತ್ಯನಾರಾಯಣ ಬಡಿಗೇರ್ ಅವರುಗಳಿಗೆ ಕೃತಜ್ಞತೆಗಳು.

ಸದಾ ನನ್ನ ಏಳಿಗೆಯನ್ನೇ ಬಯಸಿ, ಆರ್ಶೀವಾದಿಸಿದ ಪೂಜ್ಯ ಅಜ್ಜ, ಅಜ್ಜಿಯರಾದ ಜಿ.ಎಂ.ಷಡಕ್ಷರಯ್ಯ ಸ್ವಾಮಿ, ಜಿ.ಎಂ. ಶಿವಮ್ಮ ಇವರಿಗೂ, ಮಗನ ಹಿತವೇ ತಮ್ಮ ಹಿತವೆಂದು ಭಾವಿಸಿ ಅಧ್ಯಯನಕ್ಕೆ ಸದಾ ಉತ್ಸಾಹ ತುಂಬುತ್ತಾ ಶುಭ ಕೋರಿದ ತಂದೆ ತಾಯಿಯರಾದ ಜಿ.ಎಂ. ಎರ್ರಿಸ್ವಾಮಿ, ಜಿ.ಎಂ. ಲಲಿತಮ್ಮ ಇವರನ್ನು ಈ ಸಂದರ್ಭದಲ್ಲಿ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ನನ್ನ ಓದಿಗೆ ಯಾವಾಗಲೂ ಉತ್ಸಾಹದಿಂದ ಪ್ರೋತ್ಸಾಹ ನೀಡಿದ ತಮ್ಮನಾದ ಜಿ.ಎಂ. ವೀರಭದ್ರಯ್ಯ ಹಾಗೂ ಪ್ರೀತಿಯಿಂದ ಕಾಣುವ ಎಲ್ಲಾ ಚಿಕ್ಕಪ್ಪ, ಚಿಕ್ಕಮ್ಮನವರನ್ನು ನೆನೆಯದಿರಲಾರೆ. ನನ್ನ ಅಧ್ಯಯನದ ಸಮಯದಲ್ಲಿ ಬೇಸರವನ್ನು ನೀಗಿಸುತ್ತಿದ್ದ ಪ್ರೀತಿಯ ಚಿನ್ನು ವಿವೇಕ, ತೇಜ ಇವರನ್ನು ಜ್ಞಾಪಿಸುವೆ.

ನನ್ನ ಎಂ.ಎ. ವಿದ್ಯಾಭ್ಯಾಸದಿಂದ ಸಂಶೋಧನ ನಿಬಂಧದವರೆಗೂ ನನ್ನ ಜೊತೆಗಿದ್ದು, ಪ್ರತಿ ವಿಷಯದಲ್ಲೂ ಭಾಗಿಯಾಗಿ, ಸಂದರ್ಭಕ್ಕೆ ಅನುಗುಣವಾಗಿ ಸೂಕ್ತ ಸಲಹೆಗಳನ್ನು ನೀಡುತ್ತಿದ್ದ ಪ್ರೀತಿಯ ಗೆಳೆಯರಾದ ಶೇಖರಾಚಾರಿ ಕೋಗಳಿ, ಬಿ.ಎಸ್. ಸುದೀಪ್, ಸಿ. ಶರಣಬಸವ, ಕೆ.ಎನ್. ದೀಪಾ ಇವರುಗಳನ್ನು ವಿಶೇಷವಾಗಿ ನೆನಪಿಸಿಕೊಳ್ಳುತ್ತೇನೆ. ವೀರೇಶ್ ಉತ್ತಂಗಿ, ಹಂದ್ರಾಳ್ ಮಾರ್ಕಂಡೇಯ, ಕುಬ್ಬೇರಾವ್, ಕಲ್ಲಯ್ಯ ಹಿರೇಮಠ, ಗೌರಿ, ಅನ್ನಪೂರ್ಣ, ಶಿವಾನಂದ, ಸುಧಾಕರ ಹಾಗೂ ಓ.ಬಿ.ಸಿ. ವಸತಿನಿಲಯದ ಎಲ್ಲಾ ಗೆಳೆಯರನ್ನು ತುಂಬು ಹೃದಯದಿಂದ ನೆನೆಯುವೆ. ಅಂದವಾದ ಅಕ್ಷರ ಜೋಡಣೆಯನ್ನು ಮಾಡಿಕೊಟ್ಟ ಶರಣ್ ಗ್ರಾಫಿಕ್ಸ್‌ನ ಶರಣ ವೈ.ಯಂ. ಇವರುಗಳಿಗೆ ಕೃತಜ್ಞತೆಗಳು.

# ಪರಿವಿಡಿ

# ಅಧ್ಯಾಯ ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ೧೨ನೇ ಶತಮಾನದ ವಚನ ಸಾಹಿತ್ಯದ ಯುಗ. ಸಮಾಜೋ ಧಾರ್ಮಿಕವಾಗಿ ಕ್ರಾಂತಿಯನ್ನೇ ಉಂಟುಮಾಡಿದ ಯುಗವಾಗಿದೆ. ಬಸವಾದಿ ಶರಣರು ವಚನವೆಂಬ ಅಚ್ಚಗನ್ನಡ ಸಾಹಿತ್ಯವನ್ನು ಸಮಾಜೋ-ಧಾರ್ಮಿಕ ಒಳಿತಿಗಾಗಿ ರಚಿಸಿ. ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಕ್ರಾಂತಿ ಕಹಳೆಯನ್ನು ಮೊಳಗಿಸಿದುರು. ವಚನಗಳ ಜೊತೆ-ಜೊತೆಗೆ ಧಾರ್ಮಿಕ, ಸಾಮಾಜಿಕ ಭಾಗವಾಗಿ ಹಾಡುಗಳನ್ನು ಶಿವಶರಣರು ರಚಿಸಿದರು. ವಚನಗಳು ೧೨ನೇ ಶತಮಾನಮಾನದ ಕಾಲಘಟ್ಟದಲ್ಲಿ ವಚನ ಮಾಧ್ಯಮದ ಮೂಲಕ ಮಾಡಿದ ಮಹೋನ್ನತವಾದ ಪರಿವರ್ತನೆಯನ್ನು ಬಸವಾದಿ ಶರಣರಿಂದ ರಚಿತವಾದ ಹಾಡುಗಳು ಕೂಡಾ ಜನಸಾಮಾನ್ಯರ ಮನೆಯಲ್ಲಿ, ಮನದಲ್ಲಿ ಸಾಮಾಜಿಕ ಆಚರಣೆಗಳಲ್ಲಿ ಮಹತ್ವವಾದ ಪಾತ್ರವನ್ನು ಪಡೆದುಕೊಂಡು ಬಂದಿವೆ.

ವಚನಗಳಂತೆಯೇ ರಚಿತವಾದ ಸ್ವರವಚನ ಸಾಹಿತ್ಯದ ಉದ್ದೇಶ ವೀರಶೈವ ತತ್ತ್ವಚಿಂತನೆ, ಶಿವನ ಆರಾಧನೆಯ ಮೂಲಕ ಆತ್ಮೋದ್ಧಾರ, ಸಾಮಾಜಿಕ ವಿಡಂಬನೆಯಂತಹ ವಸ್ತುಗಳನ್ನು ಹಾಡುಗಳು ಹೊಂದಿದ್ದು, ರಾಗ-ತಾಳಗಳಿಂದ ಸಂಯೋಜನೆಗೊಂಡಿವೆ. ಬಸವಾದಿ ಶರಣ ಕಾಲದಲ್ಲಿ ಆಧ್ಯಾತ್ಮ ತತ್ತ್ವ, ಶಿವಭಕ್ತಿ, ವೀರಶೈವ ತತ್ತ್ವ ಚಿಂತನೆದಂತಹ ಗಹನವಾದ ವಿಷಯ ವಸ್ತುಗಳನ್ನು ಒಳಗೊಂಡು ರಚಿತವಾದ ಸ್ವರವಚನಗಳು ನಂತರದಲ್ಲಿ ನೂರೊಂದು ವಿರಕ್ತರಲ್ಲಿ. ನಿಜಗುಣ ಶಿವಯೋಗಿ ಸಮಕಾಲೀನರ ಕಾಲದಲ್ಲಿ ವೀರಶೈವತತ್ತ್ವ ಪ್ರತಿಪಾದನೆಗೂ ಮುಖ್ಯವಾದವು. ಇಂತಹ ರಚನೆಗಳಲ್ಲಿ ಸಮಾಜಮುಖಿ ವಸ್ತುಗಳನ್ನು, ಸಂಕೇತಗಳನ್ನು ಬಳಸಿ ಜನಪದೀಯ ಆಶಯದ ಮೂಲಕ ಸಾಮಾಜಿಕ ವಿಡಂಭನೆಯನ್ನು ಮಾಡುವುದರ ಜೊತೆಗೆ ವ್ಯಕ್ತಿಯ ಆತ್ಮೋದ್ಧಾರವನ್ನು ಕೈಗೊಂಡರು. ಇಂದಿಗೂ ಜನಮಾನಸದಲ್ಲಿ ಭಜನೆ, ಕೋಲಾಟ, ಮಂಗಳಾರತಿ ಪದಗಳ ಮೂಲಕ ಆ ಹಾಡುಗಳು ಉಳಿದಿವೆ. ವಚನಗಳ ರಚನೆ ಬಸವಾದಿ ಶರಣರಿಂದ ಮೊದಲ್ಗೊಂಡು ಹರಿಹರನ ಕಾಲಕ್ಕೆ ಸ್ಥಗಿತಗೊಂಡಿತು. ಸ್ವರ ವಚನಗಳು ಬಸವಾದಿ ಶರಣರ ಕಾಲದಿಂದ ಕಿರುದೊರೆಯಾಗಿ ಆರಂಭವಾಗಿ ನೂರೊಂದು ವಿರಕ್ತರ ಕಾಲದಲ್ಲಿ ಹೆದ್ದೊರೆಯಾಗಿ, ನಿಜಗುಣಾದಿ ತೋಂಟದ ಸಿದ್ಧಲಿಂಗ ಮತ್ತು ಇವರ ಕಾಲಕ್ಕೆ ಮಹಾಪೂರವಾಗಿ ಮುಂದುವರೆದು ಪ್ರಸ್ತುತದವರೆಗೂ ಹರಿದುಬಂದಿವೆ.

ಹೀಗೆ ವಚನಕಾರರಾದಿಯಾಗಿ ಇಂದಿನವರೆಗೂ ಬೆಳೆದು ಬಂದಿರುವ ಸ್ವರವಚನಗಳು ಸಾಹಿತ್ಯಕ ದೃಷ್ಟಿಯಿಂದ ಸಾಮಾಜಿಕ, ತಾತ್ವಿಕ ದೃಷ್ಟಿಯಿಂದ, ಅತ್ಯಂತ ಮೌಲಿಕವಾಗಿವೆ. ಈ ಬಗೆಯ ಸ್ವರ ವಚನಗಳನ್ನು ನನ್ನ ಅಧ್ಯಯನಕ್ಕೆ ಆಯ್ದುಕೊಂಡ ಹಿನ್ನೆಲೆಯಲ್ಲಿ ಕನ್ನಡದ ಖ್ಯಾತ ವಿದ್ವಾಂಸರಾದ ಶ್ರೀಯುತ ಎಲ್. ಬಸವರಾಜು ಅವರು ಸಂಪಾದಿಸಿದ

ಶಿವದಾಸ ಗೀತಾಂಜಲಿ ಎಂಬ ಕೃತಿಯಲ್ಲಿನ ಶಿವಶರಣರ ಹಾಡುಗಳನ್ನು ಸ್ವರವಚನಗಳನ್ನು ಮೂಲವಸ್ತುವನ್ನಾಗಿಟ್ಟುಕೊಂಡು ನನ್ನ ಅಧ್ಯಯನವನ್ನು ಮುಂದಿನಂತೆ ಕೈಗೊಂಡಿದ್ದೇನೆ.

- ಎಲ್. ಬಸವರಾಜು ಅವರ ಜೀವನ-ಸಾಧನೆ
- ಶಿವದಾಸರ ಹಾಡುಗಳು: ಉಗಮ-ವಿಕಾಸ
- ಶಿವದಾಸರ ಹಾಡುಗಳು: ವಸ್ತು-ವಿನ್ಯಾಸ
- ಶಿವದಾಸರ ಹಾಡುಗಳು: ಭಾಷೆ-ಛಂದಸ್ಸು ಶೈಲಿ
- ಶಿವದಾಸರ ಹಾಡುಗಳು: ಸಂಪಾದನೆ

ನನ್ನ ಈ ನಿಬಂಧದಲ್ಲಿ, ಶಿವದಾಸ ಗೀತಾಂಜಲಿ ಪಠ್ಯವನ್ನು ಮೂಲ ಆಕರವಾಗಿ ಮಾಡಿಕೊಂಡಿದ್ದು, ಅಧ್ಯಯನಕ್ಕೆ ಪೂರಕವಾಗಿ ಇದರೊಳಗಿನ ಹಾಡುಗಳನ್ನೇ ಉದಾಹರಿಸಿದ್ದೇನೆ. ಅಗತ್ಯವಿದ್ದ ಸಂದರ್ಭದಲ್ಲಿ ಬೇರೆ ಕೆಲವು ಕೃತಿಗಳ ಸಹಾಯವನ್ನು ಅಧ್ಯಯನಕ್ಕೆ ಪಡೆದುಕೊಂಡಿದ್ದೇನೆ. ಶಿವದಾಸರ ಹಾಡುಗಳನ್ನು ಸ್ವರಪದ, ಸ್ವರವಚನ, ಹಾಡು, ಗೀತೆ ಮುಂತಾದ ಹೆಸರುಗಳಿಂದಲೂ ಕಲೆಯಲಾಗಿದೆ. ನನ್ನ ಅಧ್ಯಯನದಲ್ಲಿ ಶಿವಶರಣರ ಹಾಡುಗಳನ್ನು ಶಿವದಾಸರ ಹಾಡುಗಳು ಎಂದೇ ಪರಿಭಾವಿಸಿಕೊಳ್ಳಲಾಗಿದೆ.

ನಿಬಂಧದ ಎರಡನೇ ಅಧ್ಯಾಯದಲ್ಲಿ: ಸ್ವರ ವಚನಗಳ ಸಂಕಲನದ, ಸಂಪಾದನೆಯ ದೃಷ್ಟಿಯಿಂದ ಮೇರು ಕೃತಿಯಾದ 'ಶಿವದಾಸ ಗೀತಾಂಜಲಿ' ಕೃತಿಯನ್ನು ಸಂಪಾದಿಸಿದ ಶ್ರೀಯುತ ಎಲ್.ಬಸವರಾಜು ಅವರ ಜೀವನ ಸಾಧನೆಯನ್ನು ಸಂಕ್ಷಿಪ್ತವಾಗಿ ಪರಿಚಯಿಸಲು ಪ್ರಯತ್ನಿಸಿದ್ದೇನೆ. ಗ್ರಂಥಸಂಪಾದನೆಯಲ್ಲಿ ಅಪೂರ್ವ ಸೇವೆಸಲ್ಲಿಸಿದ ಶ್ರೀಯುತರು ಶಿವದಾಸರ ಹಾಡುಗಳನ್ನು ಉಪಯುಕ್ತ ಪಾಠಾಂತರಗಳೊಂದಿಗೆ ಸಂಪಾದಿಸಿಕೊಟ್ಟಿದ್ದಾರೆ. ಸಂಪಾದನೆಯ ದೃಷ್ಟಿಯಿಂದ ಈ ಕೃತಿ ಒಂದು ಮೈಲಿಗಲ್ಲು. ಶಿವನನ್ನು ಕೊಂಡಾಡುವ ಶಿವಭಕ್ತರ ಹಾಡುಗಳನ್ನು 'ಶಿವದಾಸ ಗೀತಾಂಜಲಿ' ಎಂಬ ಶೀರ್ಷಿಕೆಯಲ್ಲಿ ಸಂಪಾದನೆ ಮಾಡಿದ್ದಾರೆ. ಪ್ರಥಮ ಬಾರಿಗೆ ಶಿವನ ಆರಾಧಕರನ್ನೆಲ್ಲ 'ಶಿವದಾಸ'ರೆಂದೇ ಕರೆಯಲ್ಪಡುತ್ತಾರೆ. ಬಸವಾದಿ ಪ್ರಮಥರೇ ಸ್ವರವಚನ ಪರಂಪರೆಗೆ ಮೂಲ ಎಂಬ ಆಶಯವನ್ನು ಹೊಂದಿದ್ದಾರೆ. ಹೀಗೆ ಕೃತಿಯ ಮುಖ್ಯ ವಿವರಗಳೊಂದಿಗೆ ಎಲ್.ಬಸವರಾಜು ಅವರ ಜೀವನ ಮತ್ತು ಸಾಧನೆಯನ್ನು ಸ್ಥೂಲವಾಗಿ ಪರಿಚಯಿಸಿಕೊಟ್ಟಿದ್ದೇನೆ.

ಮೂರನೇ ಅಧ್ಯಾಯದಲ್ಲಿ: ಸ್ವರವಚನಗಳ ಉಗಮ-ವಿಕಾಸವನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದೇನೆ. ಎಲ್.ಬಸವರಾಜು ಅವರು ಹೇಳುವಂತೆ ಹಾಡಿನ ಪ್ರಕಾರಕ್ಕೆ ಕನ್ನಡದಲ್ಲಿ ಶಿವದಾಸರೇ ಆದ್ಯರು ಅವರ ಪ್ರಭಾವ ಹರಿದಾಸರಲ್ಲಿ ಮೊಳೆತು, ನಂತರ ಕೀರ್ತನೆ ಸಾಹಿತ್ಯವನ್ನು ಕಟ್ಟಿದರು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ನನ್ನ ಈ ಅಧ್ಯಾಯದಲ್ಲಿ ಬಸವರಾಜು ಅವರ ಹೇಳಿಕೆ ಪೂರಕವಾಗಿ ಸೂಕ್ತ ನಿದರ್ಶನ ಕೊಡಲು ಪ್ರಯತ್ನಿಸಿದ್ದೇನೆ. ಅದರಂತೆ ಬಸವಾದಿ ಪ್ರಮಥರಿಂದ ಹಾಡುಗಳು ಕಂಡುಬಂದರೂ ಅವುಗಳ ಪೂರ್ವ ನೆಲೆಯೂ ಕವಿರಾಜ ಮಾರ್ಗದ ಚೆತ್ತಾಣ-ಬೆದಂಡೆಯಂತಹ ಹಾಡಿನ ಪ್ರಕಾರಗಳಿದ್ದುದು ಕಂಡುಬರುತ್ತದೆ. ಎಲ್.ಬಸವರಾಜು ಅವರು ಸಹ ಈ ನಿದರ್ಶನವನ್ನು ಒಪ್ಪುತ್ತಾರೆ. ಇವೆಲ್ಲವುಗಳ ಹಿನ್ನೆಲೆಯಲ್ಲಿ ಈ ಅಧ್ಯಾಯದಲ್ಲಿ ಶಿವದಾಸರ ಹಾಡುಗಳನ್ನು

ಕವಿರಾಜ ಮಾರ್ಗದ ಚೆತ್ತಾಣ ಬೆದಂಡೆಗಳ ಮೂಲಕ ಆರಂಭಿಸಿ, ಬಸವಾದಿ ಪ್ರಮಥರಲ್ಲಿ ಅವರ ಸ್ಪಷ್ಟ ರೂಪ ನೀಡಿ, ನಂತರ ಅದರ ಪರಂಪರೆಯನ್ನು ನೂರೊಂದು ವಿರಕ್ತರು, ನಿಜಗುಣ ಶಿವಯೋಗಿ, ಬಾಲಲೀಲಾ ಮಹಾಂತ ಶಿವಯೋಗಿಗಳ ಸ್ವರವಚನಗಳವರೆಗೆ ಕೊಂಡೊಯ್ಯುವ ಕಿರು ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಿದ್ದೇನೆ.

ನಾಲ್ಕನೇ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯದಲ್ಲಿ ವಚನಗಳಷ್ಟೇ ಮಹತ್ವವನ್ನು ಪಡೆದಿರುವ ಸ್ವರವಚನಗಳು ಒಳಗೊಂಡಿರುವ ವಸ್ತು-ವಿನ್ಯಾಸದ ಬಗೆಗೆ ಅಧ್ಯಯನ ಮಾಡಲಾಗಿದೆ. ಇಲ್ಲಿ ಪ್ರಮುಖವಾಗಿ ಆಯಾ ಕಾಲಘಟ್ಟಗಳ ಸ್ವರವಚನಕಾರರ ಹಾಡುಗಳನ್ನು ಆಧಾರವಾಗಿಟ್ಟುಕೊಂಡು ಆಯಾ ಕಾಲಘಟ್ಟದಲ್ಲಿ ರಚಿತವಾದ ಸ್ವರವಚನಗಳ ಮುಖ್ಯ ವಸ್ತು-ವಿನ್ಯಾಸ ಹೇಗೆ ಕೂಡಿ ಕೊಂಡಿದೆಂಬುದನ್ನು ಚರ್ಚಿಸಿದ್ದೇನೆ. ಶಿವಭಕ್ತಿ, ವೀರಶೈವ ತತ್ತ್ವ ಪ್ರತಿಪಾದನೆ, ಆಚರಣೆ ಇವೇ ವಸ್ತು ಪ್ರಧಾನವಾದ ಹಾಡುಗಳಿದ್ದರೂ ಇದರ ಜೊತೆಗೆ ಕಾಲಕ್ಕೆ ಅನುಗುಣವಾಗಿ ಸ್ವರವಚನಗಳ ವಸ್ತು ಮತ್ತು ವಿನ್ಯಾಸದಲ್ಲಿ ಉಂಟಾಗುವ ಪರಿವರ್ತನೆ ಎಂಥದ್ದು ಎಂಬುದನ್ನು ಈ ಅಧ್ಯಯನದಲ್ಲಿ ಅಭಿವ್ಯಕ್ತಪಡಿಸಲು ಪ್ರಯತ್ನಿಸಿದ್ದೇನೆ.

ಅಧ್ಯಾಯ ಐದರಲ್ಲಿ: ಶಿವದಾಸರು ಸಾಮಾಜಿಕ-ಧಾರ್ಮಿಕ ಬದಲಾವಣೆ ವೀರಶೈವ ಧರ್ಮಪ್ರತಿಪಾದನೆಗೆ ವಚನಗಳಂತೆ ಹಾಡುಗಳನ್ನು ರಾಗ-ತಾಳಕ್ಕೆ ಅನುಗುಣವಾಗಿ ರಚಿಸಿದರು. ಅವರು ಮುಖ್ಯವಾಗಿ ಜನರ ಸಂವಹನ ದೃಷ್ಟಿಯಿಂದ ವಾಚನಗಬ್ಬಕ್ಕಿಂತ ಹಾಡುಗಬ್ಬ ಹೆಚ್ಚು ಸೂಕ್ತವೆಂಬುದನ್ನು ಮನಗಂಡು ಬಸವೋತ್ತರ ಯುಗದಲ್ಲಿ ಬಂದಂಥ ಸ್ವರವಚನಕಾರರೆಲ್ಲಾ ಸಾಹಿತ್ಯಕ್ಕೆ ರಾಗ ತಾಳಗಳನ್ನು ಹಾಕಿ ಹಾಡುಗಳನ್ನು ಕಟ್ಟಿದರು. ಅವರ ಮೂಲ ಉದ್ದೇಶ. ತತ್ತ್ವಪ್ರತಿಪಾದನೆಯನ್ನು ಜನಸಾಮಾನ್ಯರಿಗೆ ಸುಲಭವಾಗಿ ತಿಳಿಸುವುದೇ ಆಗಿತ್ತೇ ವಿನಃ ಹಾಡುಗಳನ್ನು ಛಂದೋ ನಿಯಮಾನುಸಾರವಾಗಿ ರಚಿಸುವಿಕೆ ಆಗಿರಲಿಲ್ಲ. ತಮಗೆ ಅನಿಸಿದ್ದನ್ನು ರಾಗಗಳ ಮೂಲಕ ಕಟ್ಟಿ ಹಾಡುತ್ತಿದ್ದರು. ಇಂತಹ ಸ್ವರವಚನಗಳಲ್ಲಿ ಛಂದೋನಿಯಮಗಳ ಲಕ್ಷಣಗಳಿದ್ದು, ಅವುಗಳನ್ನು ಹುಡುಕುವ ಪ್ರಯತ್ನವನ್ನು ಹಿಂದಿನಿಂದ ವಿದ್ವಾಂಸರು ಮಾಡಿದ್ದಾರೆ. ಅದರಂತೆ ಅಧ್ಯಯನಕ್ಕೆ ಪೂರಕವೆಂಬಂತೆ ಮಾತ್ರ, ಅಂಶ ಗಣ ಛಂದಸ್ಸಿನ ಲಕ್ಷಣಗಳಿರುವ ಶಿವಾದಸರ ಹಾಡುಗಳಲ್ಲಿ ಮಾತ್ರ ಛಂದಸ್ಸು ಅಲ್ಪಪ್ರಮಾಣ, ಅಂಶಗಣಛಂದಸ್ಸಿನ ಲಕ್ಷಣಗಳನ್ನೊಳಗೊಂಡ ವಿವಿಧ ಛಂದಸ್ಸಿನ ಪ್ರಕಾರಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಹುಡುಕುವ ಪ್ರಯತ್ನ ಮಾಡಿದ್ದೇನೆ.

ಆರನೇಯ ಅಧ್ಯಾಯದಲ್ಲಿ 'ಶಿವದಾಸರ ಹಾಡುಗಳ ಸಂಪಾದನೆ'ಯನ್ನು ಕುರಿತು ವಿವರಿಸಲಾಗಿದೆ. ಎಲ್.ಬಸವರಾಜು ಅವರ ಶಿವದಾಸ ಗೀತಾಂಜಲಿ ಸಂಪಾದನೆಯ ದೃಷ್ಟಿಯಿಂದ ಅಪೂರ್ವ ಕೃತಿ. ಬಸವರಾಜು ಅವರು ಶಿವದಾಸರ ಹಾಡುಗಳನ್ನು ಸಂಪಾದಿಸಿದ ಪರಿಯೇ ಒಂದು ವೈಶಿಷ್ಟ್ಯವಾಗಿ ಕಂಡುಬರುತ್ತದೆ. ೨೪ ಶರಣರ ೨೪೦ಕ್ಕೂ ಅಧಿಕ ಹಾಡುಗಳನ್ನು, ೧೩ಕ್ಕೂ ಹೆಚ್ಚು ಓಲೆಗ್ರಂಥಗಳ ಸಹಾಯ ಪಡೆದು ಸಂಪಾದಿಸುವಿಕೆ, ಪಾಠಾಂತರ ಗುರುತಿಸುವಿಕೆ, ಪ್ರಸ್ತಾವನೆ, ಅನುಬಂಧದಲ್ಲಿ ಅಕಾರಾದಿ ಪಲ್ಲವಿಗಳ ವಿವರ, ರಾಗಗಳ ಅಕಾರಾದಿ, ಶಿವಶರಣ ಜೀವನ ವೃತ್ತಾಂತ, ಅಂಕಿತಗಳ ಅಕಾರಾದಿ, ಶಬ್ದಾರ್ಥಗಳ ಅಕಾರಾದಿ ಹಾಗೂ ಹಾಡಿನ ಪುಟ, ಕೊನೆಗೆ ಹಾಡಿನ ನುಡಿಗಳ ವ್ಯಾಖ್ಯಾನ. ಹೀಗೆ ಸಂಪಾದನೆಯ ದೃಷ್ಟಿಯಿಂದ ಹಿಂದೆಂದೂ ಕಾಣದ, ಮುಂದಿನವರಿಗೂ ಮಾದರಿಯಾದ

ಎಲ್.ಬಸವರಾಜು ಅವರ ಸಂಪಾದನೆಯ ವೈಜ್ಞಾನಿಕತೆಯನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸುವುದರ ಮೂಲಕ ವೀರಶೈವರ ಹಾಡಿನ ಪರಂಪರೆಯ ಮಹತ್ವವನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದೇನೆ. ಜೊತೆಗೆ ಶಿವದಾಸರ ಹಾಡುಗಳ ಆರಂಭದ ಸಂಕಲನಗಳಾದ ಮಹಲಿಂಗ, ಜಕ್ಕಣ್ಣರ ಏಕೋತ್ತರ ಶತಸ್ಥಲಗಳ ಆದಿಯಾಗಿ ಬಸವರಾಜು ಸಂಪಾದಿತ 'ಶಿವದಾಸ ಗೀತಾಂಜಲಿ'ಯ ವರೆಗಿನ ಸ್ವರವಚನಗಳ ಸಂಕಲನ ಕೃತಿಗಳ ಸ್ಥೂಲ ಚಿತ್ರಣವನ್ನು ಈ ಅಧ್ಯಾಯದಲ್ಲಿ ಮಂಡಿಸಲಾಗಿದೆ.

'ಶಿವದಾಸ ಗೀತಾಂಜಲಿ' ಕೃತಿಯೂ ಬಸವಾದಿ ಶರಣರ ಅಂದರೆ ಶಂಕರದೇವ, ಬತ್ತಲೇಶ್ವರರ ವರೆಗಿನ ಹಾಡುಗಳನ್ನು ಮಾತ್ರ ಒಳಗೊಂಡಿದ್ದು. ಅಧಿಕವಾಗಿ ಬಸವಾದಿ ಶರಣರ ಹಾಡುಗಳೇ ಕಂಡುಬರುತ್ತವೆ. ಆದರೆ ನನ್ನ ಅಧ್ಯಯನದ ವ್ಯಾಪ್ತಿಯನ್ನು ಬಸವಾದಿ ಶರಣರ ಆದಿಯಾಗಿ ನಂತರದ ಕಾಲಘಟ್ಟಗಳ ಸ್ವರವಚನಕಾರರ ಸ್ವರ ವಚನಗಳ ಬಗೆಗೂ ವಿಸ್ತರಿಸಿಕೊಂಡಿದ್ದೇನೆ. ಇದುವರೆಗೂ ಸಾಹಿತ್ಯ ವಲಯವನ್ನು ಅವಲೋಕಿಸಿದಾಗ, ವಚನಗಳಷ್ಟು ಹಿಂದಾಗಿ ಸ್ವರವಚನಗಳ ಬಗೆಗಿನ ಅಧ್ಯಯನಗಳು ಅಷ್ಟಾಗಿ ಕಂಡುಬರುವುದಿಲ್ಲ. ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತು, ಸುತ್ತೂರು ಮಠ ಗದುಗಿನ ತೋಂಟದಾರ್ಯ ಮಠದ ಆಶ್ರಯದಲ್ಲಿ ಸಂಕಲನಗಳು, ಸ್ವರವಚನ ಸಾಹಿತ್ಯ ಅಧ್ಯಯನ ಗ್ರಂಥಗಳು ಪ್ರಕಟವಾಗಿವೆ. ಅವುಗಳಲ್ಲಿ ಹೆಚ್ಚಿನವು ಹಾಡುಗಳನ್ನು ಒಳಗೊಂಡ ಸಂಪಾದನೆಗಳು, ಶಿವಯೋಗ ಪ್ರದೀಪಿಕೆ, ಗಣವಚ ರತ್ನಾವಳಿ, ಕೈವಲ್ಯ ಪದ್ಧತಿ, ಕೈವಲ್ಯ ಕಲ್ಪವಲ್ಲರಿ ಮುಂತಾದ ಬಸವಾದಿ ಪ್ರಮಥರ ವಿಚಾರಗಳನ್ನು ಒಳಗೊಂಡ ಹಾಡುಗಳು ಸಂಪಾದನೆಗಳು ಕಂಡುಬರುತ್ತವೆ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆಯವರ ಸ್ವರವಚನಗಳು ಒಂದು ವಿವೇಚನೆ, ಸಿ.ಮಹಾದೇವಪ್ಪ ವೀರಶೈವ ವಾಗ್ಗೇಯಕಾರರು, ಎಲ್.ಬಸವರಾಜು, ಶಿವದಾಸ ಗೀತಾಂಜಲಿಯಂತಹ ಕೆಲ ಅಮೂಲ್ಯ ಸ್ವತಂತ್ರ ಕೃತಿಗಳು ಕಂಡುಬರುತ್ತವೆಯಾದರೂ ಅತೀ ವಿರಳ.

ನನಗೆ ಆರಂಭದಿಂದಲೂ ವಚನಕಾರಾದಿಯಾಗಿ ವೀರಶೈವ ಶರಣರ ಹಾಡುಗಳ ಬಗೆಗೆ ಆಸಕ್ತಿ ಇದ್ದುದರಿಂದ, ಸ್ವರವಚನಗಳ ಸಂಪಾದಿತ ಕೃತಿಯಾದ ಎಲ್.ಬಸವರಾಜು ಅವರ ಶಿವದಾಸ ಗೀತಾಂಜಲಿಯ ಬಗ್ಗೆ ನಡೆದ ಅಧ್ಯಾಯನಗಳು ಅಷ್ಟಾಗಿ ಕಂಡುಬರುವುದಿಲ್ಲ. ಆದ್ದರಿಂದ ಶಿವದಾಸ ಗೀತಾಂಜಲಿಯನ್ನೇ ನನ್ನ ಅಧ್ಯಯನಕ್ಕೆ ಮೂಲ ಪಠ್ಯವಾಗಿಟ್ಟುಕೊಂಡು ಸ್ವರವಚನಗಳ ಬಗೆಗೆ ಅಧ್ಯಯನ ಕೈಗೊಂಡಿದ್ದೇನೆ.

# ಅಧ್ಯಾಯ ೨

# ಎಲ್. ಬಸವರಾಜು ಅವರ ಜೀವನ-ಸಾಧನೆ

ಗ್ರಂಥಸಂಪಾದನೆ, ಅನುವಾದದಂತಹ ವಿವಿಧ ವಲಯಗಳಲ್ಲಿ ಸುಮಾರು ಐವತ್ತು ದಶಕಗಳಿಗಿಂತಲೂ ಅಧಿಕವಾದ ಸೇವೆ ಸಲ್ಲಿಸಿದ ಎಲ್.ಬಸವರಾಜು ಅವರದು ಬಹುಮುಖ ಪ್ರತಿಭೆ, ವಿರಳ ವ್ಯಕ್ತಿತ್ವ ಅಪಾರ ವಿದ್ವತ್ತು, ಪರಿಶ್ರಮ, ಬಹುಶತೃತ್ವವನ್ನು ಬಯಸುತ್ತಾ ಗ್ರಂಥಸಂಪಾದನೆ, ಸಂಶೋಧನೆಯ ಕ್ಷೇತ್ರಗಳಲ್ಲಿ ದುಡಿದ ಶ್ರೀಯುತರು ತಮ್ಮ ಪ್ರತಿಭೆಯನ್ನು ಹಾಗೆಯೇ ನಿರಂತರವಾಗಿ ಮುಂದುವರೆಸಿ ಅದನ್ನು ಸೃಜನಶೀಲ ಸಾಹಿತ್ಯ ಕ್ಷೇತ್ರದವರೆಗೂ ವಿಸ್ತರಿಸಿ, ಇದೂವರೆಗೂ ಸುಮಾರು ನಲವತ್ತಕ್ಕೂ ಅಧಿಕ ಕೃತಿಗಳನ್ನು ರಚಿಸಿದ್ದಾರೆ. ಸಾಹಿತ್ಯ ಕ್ಷೇತ್ರದ ವಿವಿಧ ಮಜಲುಗಳನ್ನು ಕಂಡುಂಡ ಬಸವರಾಜು ಅವರು ತಮ್ಮ ವಿದ್ವತ್ ಪ್ರತಿಭೆಯ ಮೂಲಕ ಆಯಾ ಕಾಲದ ತಾತ್ವಿಕ ಚಿಂತನೆಗಳನ್ನು ತಮ್ಮ ಚಿಂತನೆಯಲ್ಲಿ ದುಡಿಸಿಕೊಂಡಿದ್ದಾರೆ. ಸರಳ ನೇರ ನಿಷ್ಠೂರ, ಸತ್ಯಪರ ನಡೆ-ನುಡಿ ಮತ್ತು ಮನೋಧರ್ಮಗಳನ್ನು ಒಳಗೊಂಡ ಇವರ ವ್ಯಕ್ತಿತ್ವವು ಯಾವುದೇ ಅಂಶವನ್ನು ಸುಲಭವಾಗಿ ಒಪ್ಪಿಕೊಳ್ಳುವಂಥದ್ದಲ್ಲ. ಕೂಲಂಕುಶವಾಗಿ ಪರಿಶೀಲಿಸಿದಾಗ ಅದರ ಒಳಿತು, ಕೆಡಕು, ಸ್ಪಷ್ಟ ನಿರೂಪಣೆ ನೀಡುವುದರ ಮೂಲಕ ಅದರ ಸತ್ಯವನ್ನು ಕಂಡುಕೊಳ್ಳುವಂಥವರು. ಎಂಭತ್ತೊಂಬತ್ತು ವಯಸ್ಸಿನಲ್ಲಿಯೂ ಯುವಕರಂತೆ ತಮ್ಮ ನಿರಂತರ ಅಧ್ಯಯನ, ಬರವಣಿಗೆಯ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೆ ಅಪಾರ ಕೊಡುಗೆಯನ್ನು ನೀಡುತ್ತಲೇ ಇದ್ದಾರೆ.

## ಎಲ್. ಬಸವರಾಜು ಅವರ ಜೀವನ ವೃತ್ತಾಂತ

ಎಲ್. ಬಸವರಾಜು ಅವರು ಕೋಲಾರ ಜಿಲ್ಲೆಯ ಇಡಗೂರು ಗ್ರಾಮದಲ್ಲಿ ೧೯೧೯ರ ಅಕ್ಟೋಬರ್ ೦೭ರಂದು ಜನಿಸಿದರು. ಇಡಗೂರಿನಲ್ಲಿ ಪ್ರಾಥಮಿಕ ಶಿಕ್ಷಣ ಪಡೆದ ಶ್ರೀಯುತರು ಪ್ರೌಢಶಿಕ್ಷಣವನ್ನು ತುಮಕೂರು ಜಿಲ್ಲೆಯ ಸಿದ್ಧಗಂಗೆಯಲ್ಲಿ ಮುಗಿಸಿದರು. ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಿ.ಎ. ಮತ್ತು ಎಂ.ಎ. ಪದವಿಯನ್ನು ಮುಗಿಸಿದರು. ತಮ್ಮ ವಿದ್ಯಾಭ್ಯಾಸದುದ್ದಕ್ಕೂ ಎದುರಾದ ಪ್ರತಿಕೂಲ ಪರಿಸ್ಥಿತಿಯನ್ನು ಆತ್ಮಸ್ಥೈರ್ಯದಿಂದ ಎದುರಿಸಿ ಬದುಕನ್ನು ರೂಪಿಸಿಕೊಂಡು ದಾವಣಗೆರೆಯ ಡಿ.ಆರ್.ಎಂ. ಕಾಲೇಜಿನಲ್ಲಿ ಉಪನ್ಯಾಸಕರಾಗಿ ಅಧ್ಯಾಪಕವೃತ್ತಿ ಆರಂಭಿಸಿ, ಮುಂದೆ ಮೈಸೂರು ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕ, ಪ್ರಾಧ್ಯಾಪಕರಾಗಿ ಮೂರು ದಶಕಗಳಿಗೂ ಅಧಿಕವಾಗಿ ಸೇವೆಯ ಜೊತೆಗೆ ನಿರಂತರವಾಗಿ ಗ್ರಂಥಸಂಪಾದನೆ, ಸಂಶೋಧನೆ, ಅನುವಾದದಂತಹ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡು ಸೇವೆಯಿಂದ ೧೯೭೪ರಲ್ಲಿ ನಿವೃತ್ತಿ ಹೊಂದಿದರು.[೧]

ಶ್ರೀಯುತರು ಗ್ರಂಥಸಂಪಾದನೆ, ಸಂಶೋಧನೆ, ಅನುವಾದ ಕಾವ್ಯಕೃತಿಗಳಲ್ಲಿ ಅದರಲ್ಲೂ ಗ್ರಂಥ ಸಂಪಾದನೆ, ಸಂಶೋಧನೆಯ ದುರ್ಗಮ ಕ್ಷೇತ್ರದಲ್ಲಿ ಏಕಾಂಗಿಯಾಗಿ ಹೋರಾಡಿ ಸುಮಾರು ನಲವತ್ತಕ್ಕೂ ಅಧಿಕವಾದ ಕೃತಿಗಳನ್ನು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ್ದಾರೆ. ಹೀಗೆ ವಿವಿಧ ವಲಯಗಳಲ್ಲಿ ಬಸವರಾಜು ಅವರು ತಮ್ಮನ್ನು ತೊಡಗಿಸಿಕೊಂಡರು. ಅವರಿಗೆ ಅಪಾರವಾದ ಹೆಸರು ಕೀರ್ತಿಯನ್ನು ತಂದು ಕೊಟ್ಟ ಕ್ಷೇತ್ರಗಳೆಂದರೆ ಗ್ರಂಥಸಂಪಾದನೆ ಮತ್ತು ಸಂಶೋಧನೆ ಕ್ಷೇತ್ರಗಳು. ಸಾಹಿತ್ಯ ಕ್ಷೇತ್ರದಲ್ಲಿನ ಇವರ ಅನನ್ಯ ಸೇವೆಯನ್ನು ಮನಗೊಂಡು ಅನೇಕ ಪುರಸ್ಕಾರಗಳು ಸಂದಿವೆ. ಮೈಸೂರು ವಿಶ್ವವಿದ್ಯಾಲಯದಿಂದ ೧೯೬೮ರಲ್ಲಿ "ಅಲ್ಲಮನ ವಚನ ಚಂದ್ರಿಕೆ" ಮತ್ತು "ಶಿವದಾಸ ಗೀತಾಂಜಲಿ" ಕೃತಿಗಳಿಗೆ ಡಿಲಿಟ್ ಪದವಿ ದೊರೆತಿದೆ. ಹಾಗೆಯೇ ಅಲ್ಲಮನ ವಚನ ಚಂದ್ರಿಕೆ ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ, ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿ ಹಬ್ಬದ ಪುರಸ್ಕಾರ, ೧೯೯೬ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿಯು ಲಭಿಸಿದೆ. ಹಾಗೆಯೇ ಗೌರವಪ್ರಶಸ್ತಿ, ಚಿದಾನಂದ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳು ಸೇರಿದಂತೆ ಸಂ.ಶಿ.ಭೂಸನೂರಮಠ ಪ್ರತಿಷ್ಠಾನ ಪ್ರಶಸ್ತಿ, ೨೦೦೦ರಲ್ಲಿ ಕರ್ನಾಟಕ ಸರ್ಕಾರದ ಪಂಪ ಪ್ರಶಸ್ತಿ, ೨೦೦೧ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಬುದ್ಧಚರಿತೆಗೆ ಅನುವಾದ ಪ್ರಶಸ್ತಿ ಮೊದಲಾದ ಅನೇಕ ಗೌರವ ಪ್ರಶಸ್ತಿಗಳು ಎಲ್. ಬಸವರಾಜು ಅವರಿಗೆ ಸಂದಿವೆ.

**ಸಾಹಿತ್ಯ ಕೃಷಿ**

ಎಲ್. ಬಸವರಾಜು ಅವರ ಸಾಹಿತ್ಯ ಕೃಷಿ ಅಗಾಧವಾದುದು. ನಲವತ್ತಕ್ಕೂ ಅಧಿಕ ಕೃತಿಗಳನ್ನು ಸಾಹಿತ್ಯ ಕ್ಷೇತ್ರಕ್ಕೆ ನೀಡಿರುವ ಇವರ ಕೊಡುಗೆಯನ್ನು ವಿವಿಧ ಭಾಗಗಳಾಗಿ ವಿಭಾಗಿಸಿಕೊಂಡು ಅಧ್ಯಯನ ಮಾಡಬಹುದು.

೧. ಸಂಶೋಧನೆ ಮತ್ತು ಗ್ರಂಥಸಂಪಾದನೆ

೨. ಕಾವ್ಯ

೩. ಅನುವಾದ

**೧. ಸಂಶೋಧನೆ ಮತ್ತು ಗ್ರಂಥಸಂಪಾದನೆ :** ಗ್ರಂಥಸಂಪಾದನೆ ಮತ್ತು ಸಂಶೋಧನೆಗಳು ಎರಡು ಪೂರಕವಾದವುಗಳು ಒಂದನ್ನು ಬಿಟ್ಟು ಮತ್ತೊಂದಿಲ್ಲ. ಎರಡು ಜೊತೆ ಜೊತೆಯಾಗಿಯೇ ನಡೆಯುತ್ತಿರುತ್ತವೆ. ಗ್ರಂಥಸಂಪಾದನೆಯೆನ್ನುವುದು ಸಂಪಾದಕನು ಕವಿಯ ಮನವನ್ನು ಹೊಕ್ಕು ಶುದ್ಧ ಪಾಠವನ್ನು ನಿರ್ಣಯಿಸಬೇಕಾದ ಸ್ಪಷ್ಟಾತ್ಮಕವಾದ ಪ್ರಕ್ರಿಯೆ. ಹಾಗೆಯೇ ಸಂಶೋಧನೆ ಎನ್ನುವುದು ಶುಷ್ಕ ಪಾಂಡಿತ್ಯವಾಗಲಿ, ಪೂರ್ವನಿರ್ಧರಿತ ಊಹಾತ್ಮಕವಾಗಿ ತಿಳಿದಂತೆ ನಿರ್ಣಯಿಸುವುದಲ್ಲ. ಲಭ್ಯವಾದ ಮಾಹಿತಿಗಳಿಂದ ವಾಸ್ತವದ ಸತ್ಯವನ್ನು ಕಂಡುಕೊಳ್ಳುವ ಪ್ರಾಮಾಣಿಕ ಪ್ರಯತ್ನ, ಇಲ್ಲಿ ಸಂಪಾದಕನು ಒಂದು ರೀತಿಯಲ್ಲಿ ಸಂಶೋಧಕನಾಗಿರುತ್ತಾನೆ. ಲಭ್ಯವಾದ ಆಕರಗಳ ಸಹಾಯದಿಂದ ಶುದ್ಧ ಪಾಠ ನಿಷ್ಕರ್ಷ ಮಾಡಿ ಸಂಪಾದಿಸುವಲ್ಲಿ ಅವನು ನಿಜವಾಗಿಯೂ ಸಂಶೋಧಕನಾಗಿದ್ದಲ್ಲಿ ಮಾತ್ರ ಸಾಧ್ಯ. ಹೀಗೆ ಸಂಶೋಧನೆ ಮತ್ತು ಗ್ರಂಥಸಂಪಾದನೆಗಳು ಜೊತೆ ಜೊತೆಯಾಗಿ ಎಲ್. ಬಸವರಾಜು ಅವರಲ್ಲಿ ಮೇಳಯಿಸಿವೆಯೆಂಬುದನ್ನು ಅವರ ಸಂಪಾದನ ಕೃತಿಗಳನ್ನು ಲಕ್ಷಿಸುವುದರ ಮೂಲಕ ತಿಳಿಯಬಹುದು.

"ಶ್ರೀಯುತರು ಸಂಪಾದಿಸಿರುವ ಕೃತಿಗಳನ್ನು ಸ್ಥೂಲವಾಗಿ ನಾಲ್ಕು ಭಾಗಗಳಾಗಿ ವಿಂಗಡಿಸಬಹುದು.

೧. ಪ್ರಾಚೀನ ಕೃತಿಗಳ ಸಂಪಾದನೆ.

೨. ಮಧ್ಯಕಾಲದ ಕೃತಿಗಳ ಸಂಪಾದನೆ.

೩. ವಚನ ಸಾಹಿತ್ಯ ಸಂಪಾದನೆ.

೪. ಲಕ್ಷಣ ಗ್ರಂಥಗಳ ಸಂಪಾದನೆ."[೨]

**೧. ಪ್ರಾಚೀನ ಕೃತಿಗಳ ಸಂಪಾದನೆ**

ಸ್ವತಂತ್ರವಾದ ಕಾವ್ಯ ರಚನೆಯನ್ನಾದರೂ ಕೈಗೊಳ್ಳಬಹುದು, ಆದರೆ ಪ್ರಾಚೀನ ಕಾವ್ಯಗಳ ಸಂಪಾದನೆಯು ಅದಕ್ಕಿಂತ ದುಸ್ತರವಾದುದು. ಪ್ರಾಚೀನ ಕಾವ್ಯಗಳ ಅದರಲ್ಲೂ ಮಾರ್ಗಕಾವ್ಯ ಸಂಪಾದನೆಯು ಬಹಳ ಕಠಿಣಕರವಾದುದು. ಮಾರ್ಗಕಾವ್ಯ ಸಂಪಾದನೆಗೆ ಹೆಚ್ಚು ಪ್ರತಿಗಳು ಸಿಕ್ಕಷ್ಟು ಸಂಪಾದನೆಯು ಅಷ್ಟೇ ಪ್ರಾಮಾಣಿಕವಾಗುತ್ತದೆ. ಮಾರ್ಗ ಸಾಹಿತ್ಯ ಸಂಪಾದನೆಗೆ ಸಂಪಾದಕನಿಗೆ ಆಳವಾದ ಪ್ರತಿಭೆ, ವಿದ್ವತ್, ಶ್ರದ್ಧೆ ತಾಳ್ಮೆ ಇರಬೇಕು. ಹಾಗಾದರೆ ಮಾತ್ರ ಶುದ್ಧ ಪಾಠವನ್ನು ಸಂಪಾದನೆಮಾಡಲು ಸಾಧ್ಯವಾಗುತ್ತದೆ. ಸಂಪಾದಕನಿಗೆ ಮೇಲಿನ ಅರ್ಹತೆಗಳು ಇಲ್ಲದಿದ್ದ ಪಕ್ಷದಲ್ಲಿ ಆ ಸಂಶೋಧನೆಯು ಬಾಲಿಶವಾಗುತ್ತದೆ ಎನ್ನಬಹುದು.

ಎಲ್. ಬಸವರಾಜು ಅವರು ಪ್ರಾಚೀನ ಕಾವ್ಯಗಳ ಬಗ್ಗೆ ಆಳವಾದ ಜ್ಞಾನ, ವಿದ್ವತ್, ಪ್ರತಿಭೆಯನ್ನು ಉಳ್ಳವರು ಅವರು ಮಾರ್ಗ ಸಾಹಿತ್ಯದ ಸಂಪಾದನೆಗೆ ತೋರಿರುವ ತಾಳ್ಮೆ, ಪರಿಶ್ರಮ ಎಂತಹದು ಎಂಬುದನ್ನು ಅವರ ಸಂಪಾದಿತ ಕೃತಿಗಳನ್ನು ಅನುಲಕ್ಷಿಸುವುದರ ಮೂಲಕ ತಿಳಿಯಬಹುದು.

ಮಾರ್ಗಸಾಹಿತ್ಯ ಕೃತಿಗಳಲ್ಲಿ ಒಂದಾದ "ಆದಿಪುರಾಣ"ವನ್ನು ಶ್ರೀಯುತರು ೧೯೭೬ರಲ್ಲಿ ಸಮರ್ಥವಾಗಿ ಸಂಪಾದಿಸಿದ್ದಾರೆ. ಇವರು ಆದಿಪುರಾಣ ಸಂಪಾದಿಸುವ ಪೂರ್ವದಲ್ಲಿ, ಈ ಕೃತಿಯನ್ನು ಎಸ್.ಜಿ.ನರಸಿಂಹಾಚಾರ್ (೧೯೦೦)ರಲ್ಲಿ ಕೆ.ಜಿ.ಕುಂದಣಕಾರ (೧೯೫೩) ಸಂಪಾದಿಸಿದ್ದರು. ಇವೆರಡನ್ನು ಮನಗಂಡಿದ್ದ ಬಸವರಾಜು ಅವರು ಇವೆರಡರ ಜೊತೆ ಹನ್ನೆರಡು ಓಲೆಯ ಪ್ರತಿಗಳನ್ನು ಬಳಸಿಕೊಂಡು ಹಿಂದಣ ಆವೃತ್ತಿಗಿಂತ ಭಿನ್ನವಾದ ರೀತಿಯಲ್ಲಿ ಸಂಪಾದಿಸಿ ತೋರಿಸಿದ್ದಾರೆ. ಕಾಲದ ದೃಷ್ಟಿಯಿಂದ ಅತೀ ಪ್ರಾಚೀನವಾದವೆಂದು ತಿಳಿದು, ಮೂಲಪ್ರೇರಣೆ ಪೂರಕವಾಗಿ ಪಾಠ ಪರಿಷ್ಕರಣೆ, ಸಂಕಲನ ಇನ್ನಿತರ ಸಂಪಾದನೆ ಕಾರ್ಯಕ್ಕೆ ಬಳಸಿದ್ದಾರೆ. ಇದರ ಜೊತೆಗೆ ಪಂಪನ ಆದಿಪುರಾಣವು ಜಿನಸೇನರ ಪೂರ್ವಪುರಾಣಕ್ಕೆ ಎಷ್ಟು ಪ್ರಭಾವಿತವಾಗಿದೆ. ಎಲ್ಲಿ ಭಿನ್ನವಾಗಿದೆ ಪಂಪನ ಪ್ರತಿಭೆಯು ಎಲ್ಲೆಲ್ಲಿ ಮಿಂಚಿದೆ ಎಂಬುದನ್ನು ಸೂಕ್ತವಾದ ಪೀಠಿಕೆಯ ಭಾಗದಲ್ಲಿ ತಿಳಿಸಿದ್ದಾರೆ. ಅದರಂತೆ ಕಾವ್ಯದ ಪದ್ಯಗಳ ಕೆಳಗೆ ಸಂದರ್ಭೋಚಿತವಾಗಿ ನೀಡಿರುವ ಅಡಿಟಿಪ್ಪಣಿಗಳು ಕೃತಿಯ ಮೌಲಿಕತೆಯನ್ನು ಮತ್ತಷ್ಟು ಹೆಚ್ಚಿಸಿವೆ ಎನ್ನಬಹುದು. ಕೊನೆಗೆ ಅರ್ಥಕೋಶ, ಟಿಪ್ಪಣಿಗಳನ್ನು ನೀಡಲಾಗಿದೆ. ಒಟ್ಟಾರೆಯಾಗಿ ಬಸವರಾಜು ಅವರ ಆದಿಪುರಾಣದ ಸಂಪಾದನೆ ಉಳಿದೆಲ್ಲಾ ಸಂಪಾದನೆಗಳಿಗಿಂತ ಶ್ರೇಷ್ಠತರವಾಗಿದೆ. ಕಾವ್ಯಾಭ್ಯಾಸಿಗಳಿಗೆ ಅನುಕೂಲವಾಗುವಂತೆ ಸಂಧಿ, ಸಮಾಸಗಳನ್ನು ಬಿಡಿಸಿ ತೋರಿಸಿದ್ದಾರೆ. ವಿವರವಾದ ಪ್ರಸ್ತಾವನೆ, ಪಂಪನಕಾಲ,

ಪರಿಸರ ವಿಚಾರ, ಕೃತಿ ವಿಮರ್ಶೆ, ಆದಿಪುರಾಣದ ಕಥಾಸಾರ ಇತ್ಯಾದಿ ವಿಷಯಗಳ ವಿವೇಚನೆಯನ್ನು ಸಾರ್ಥಕ ಮಾಡಿ ಒಟ್ಟಾರೆ ಕೃತಿಯ ಮೌಲ್ಯವನ್ನು ಹೆಚ್ಚಿಸಿದ್ದಾರೆ.

ಆದಿಪುರಾಣವನ್ನು ಶಾಸ್ತ್ರೀಯವಾಗಿ ಸಂಪಾದಿಸಿದ ಬಸವರಾಜು ಅವರು "ಪಂಪಭಾರತ"ದಂತಹ ಪ್ರೌಢ ಚಂಪೂಕಾವ್ಯಗಳನ್ನು. ಆಸಕ್ತ ಓದುಗ. ವಿದ್ಯಾರ್ಥಿಗಳಿಗೆ ಅನುಕೂಲಕರ ಎಂಬಂತೆ ಪಾಠಪರಿಷ್ಕರಣೆಯು ಸೇರಿದಂತೆ ಹಲವು ರೀತಿಯನ್ನಾಧರಿಸಿ ೧೯೫೫ರಲ್ಲಿ ಸರಳ ಪಂಪಭಾರತವನ್ನು ಸಂಪಾದಿಸಿದ್ದಾರೆ. ಪಂಪಭಾರತದ ಸಂಪಾದನೆಯು ಗ್ರಂಥಸಂಪಾದನ ಕ್ಷೇತ್ರದಲ್ಲಿ ವಿನೂತನ ಕೊಡುಗೆ ಎನ್ನಬಹುದು. ಇಲ್ಲಿ ಶ್ರೀಯುತರು ಹಲವು ಹಸ್ತಪ್ರತಿಗಳನ್ನು ಇಟ್ಟುಕೊಂಡು ಪದ್ಯಭಾಗವನ್ನು ಅರ್ಥಾನುಸಾರವಾಗಿ ಬಿಡಿಸಿ ಕ್ಲಿಷ್ಟವೆನಿಸಿದ ಕಡೆ ಸಂಧಿಗಳನ್ನು ಬಿಡಿಸಿ, ಅಲ್ಲಲ್ಲಿ ವಿರಾಮ ಚಿಹ್ನೆಗಳನ್ನು ಬಳಸಿ, ಗ್ರಂಥಪಾಠವನ್ನು ಹೊಸ ವಿನ್ಯಾಸದಲ್ಲಿ ಅಳವಡಿಸಿಕೊಂಡು ಸಂಪಾದಿಸಿದ್ದಾರೆ. ಶ್ರೀಯುತರ ಪ್ರಮುಖ ಉದ್ದೇಶ ಪಂಪ ಭಾರತವನ್ನು ಅರ್ಥಾನುಗತವಾಗಿ ವಿಂಗಡಿಸುವುದೇ ಆಗಿದೆ. ತಾವು ಸಂಪಾದಿಸುವ ಪರಿಷ್ಕೃತ ಪಠ್ಯಭಾಗವು ಪದ್ಯವಾಗಿದ್ದರೆ ಅದರ ಸಾಂಪ್ರದಾಯಿಕ ಛಂದೋವಿನ್ಯಾಸವನ್ನು ಕೈಬಿಟ್ಟು, ಅರ್ಥಪೂರ್ಣವಾಗಿ ಕೊಟ್ಟಿದ್ದಾರೆ. (ಕಂ) ಎಂದು ವೃತ್ತವಾಗಿದ್ದರೆ ಅದರ ಮುಂದೆ ಯಾವ ವೃತ್ತವೆನ್ನುವುದನ್ನು ಸೂಚಿಸಿ ತೋರಿಸಿದ್ದಾರೆ. ಗದ್ಯವನ್ನು ಅರ್ಥೈಯಿಸುವ ದೃಷ್ಟಿಯಿಂದ ಪದ್ಯಭಾಗವನ್ನು ಸೋದಾಹರಣವಾಗಿ ಬಿಡಿಸಿ ತೋರಿಸಿದ್ದರಿಂದ ಇದು ವಿದ್ವಾಂಸರಿಂದ ಹಿಡಿದು ವಿದ್ಯಾರ್ಥಿಗಳು ಸಹ ಓದಿ ಕೃತಿಯ ಸ್ವಾದವನ್ನು ಅನುಭವಿಸಲು ಸಾಧ್ಯವಾಗುತ್ತದೆ. ಕೃತಿಯ ಪ್ರಸ್ತಾವನೆಯಲ್ಲಿ ಹಿಂದಣ ಸಂಪಾದನೆಗಳು, ಹೆಚ್ಚಿನ ಓದಿಗಾಗಿ ತಾವು ಬಳಸಿಕೊಂಡಿರುವ ವಿವಿಧ ಓಲೆಗರಿಗಳ ಸ್ವರೂಪವನ್ನು ಹೇಳಿದ್ದಾರೆ. ಅನುಬಂಧ ಭಾಗದಲ್ಲಿ ಪ್ರತಿ ಆಶ್ವಾಸದ ಅರ್ಥಕೋಶ, ಶಬ್ದಗಳ ತಾತ್ಪರ್ಯ ಹಾಗೂ ಪಂಪನ ತಮ್ಮ ಜೀನವಲ್ಲಭನ ಶಾಸನದ ವಿವರಣೆಯ ಪಾಠಗಳು ಸೇರಿಸಿಕೊಂಡಿವೆ. ಇದರಿಂದ ಓದುಗ ವರ್ಗವು ಕೃತಿಯನ್ನು ಆಸ್ವಾದಿಸುವಾಗ ಪಂಪನ ಸಮಗ್ರ ಪರಿಚಯ ಅವನ ಪ್ರತಿಭೆಯ ಸಾಮರ್ಥ್ಯವನ್ನು ಅನುಭವಿಸಲು ಸಾಧ್ಯವಾಗುತ್ತದೆ. ಸಾಮಾನ್ಯರಿಗೂ ಪಂಪನ ಪ್ರತಿಭೆ ತಿಳಿಯುವಂತೆ ಸಂಪಾದಿಸಿರುವುದರಿಂದ ಸಂಪಾದಕರು ಯಶಸ್ವಿಯಾಗಿದ್ದಾರೆ ಎನ್ನಬಹುದು. ಇದೇ ರೀತಿ ಸರಳ ಪಂಪಭಾರತವನ್ನು ಸಂಪಾದಿಸಿದ ತರುವಾಯ ಅದೇ ಹಾದಿಯಲ್ಲಿ ಸರಳ ಆದಿಪುರಾಣವನ್ನು ಶ್ರೀಯುತರು ಸಂಪಾದಿಸಿ ಓದುಗ ವರ್ಗಕ್ಕೆ ಸುಲಭವಾಗಿ ಪಂಪನ ಕೃತಿಗಳನ್ನು ಲಭಿಸುವಂತೆ ಮಾಡಿದ್ದಾರೆ.

ಪಂಪನ ಇವರ ಅಧ್ಯಯನವು ಮುಂದುವರೆದು "ಪಂಪಭಾರತ"ದ ಬಗೆಗಿನ ಆಸಕ್ತಿ ಇನ್ನು ಅರ್ಥಪೂರ್ಣವಾಗಿ ಮುಂದುವರೆದು ಅದು ಶ್ರೀಸಾಮಾನ್ಯರಿಗೂ ಸುಲಭ ಗ್ರಾಹ್ಯವಾಗುವಂತೆ "ಪಂಪನ ಸಮಸ್ತ ಭಾರತ" ಕಥಾಮೃತವಾಗಿ ಇನ್ನೊಂದು ಕೃತಿಯು ಮೈದಳೆಯಿತು. ಇಲ್ಲಿ ಪಂಪಭಾರತದ ಕಥೆ ಯತ್ತಾವತ್ತಾಗಿ ಹಳಗನ್ನಡದಿಂದ ಹೊಸಗನ್ನಡಕ್ಕೆ ಛಾಯಾನುವಾದಗೊಂಡಿದೆ.

**ಮಧ್ಯಕಾಲೀನ ಕೃತಿಗಳ ಸಂಪಾದನೆ**

ಪ್ರಾಚೀನ ಕೃತಿಗಳಂತೆ ಮಧ್ಯಕಾಲೀನ ಕೃತಿಗಳ ಗ್ರಂಥಸಂಪಾದನೆಯ ಆಧುನಿಕ ವಿಧಾನಗಳನ್ನು ಅನುಸರಿಸಿ ಸಂಸ್ಕರಿಸಿ ಸಂಪಾದಿಸಿದ್ದಾರೆ. ಮಧ್ಯಕಾಲೀನ ಅದರಲ್ಲೂ ವೀರಶೈವ ಸಾಹಿತ್ಯ ಕೃತಿಗಳನ್ನು ಸಂಪಾದಿಸಲು ಹೆಚ್ಚಿನ

ಒತ್ತು ನೀಡಿದ್ದಾರೆ. ವಚನಸಾಹಿತ್ಯ ಕುರಿತ ಎಲ್. ಬಸವರಾಜು ಅವರ ಅಧ್ಯಯನ ಮತ್ತು ಸಂಶೋಧನೆಗಳು ವಿದ್ವತ್ ಕ್ಷೇತ್ರದಲ್ಲಿ ಹೊಸ ಹಾದಿಯನ್ನು ಹಿಡಿದು ತೆರೆಯುವವರ ಮೂಲಕ ಪ್ರಮುಖ ಸ್ಥಾನ ಪಡೆಯುವುದರ ಜೊತೆಗೆ ಬಸವರಾಜು ಅವರಿಗೆ ಅಪಾರ ಕೀರ್ತಿಯನ್ನು ತಂದು ಕೊಟ್ಟಿವೆ. ಈ ಕ್ಷೇತ್ರದಲ್ಲಿ ಮಧ್ಯಕಾಲೀನ ಸಾಹಿತ್ಯದ ಒಂದೊಂದು ಸಂಪಾದನ ಕೃತಿಗಳು ತನ್ನದೇ ಆದ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿವೆ. ಸಂಶೋಧಕರಿಗೆ ಇವರು ಸಂಪಾದಿಸಿದ ಮಧ್ಯಕಾಲೀನ ಕನ್ನಡ ಸಾಹಿತ್ಯದ ಒಂದೊಂದು ಕೃತಿಗಳು ಸಂಶೋಧನೆಗೆ ಮೂಲ ಆಕರಗಳಾಗಿ ಪರಿಣಮಿಸಿವೆ.

ಅಲ್ಲಮಪ್ರಭು, ಬಸವಣ್ಣ, ಅಕ್ಕಮಹಾದೇವಿ, ದಾಸಿಮಯ್ಯರಂತಹ ಅನೇಕ ಶಿವಶರಣರು ವಚನಗಳ ಜೊತೆಗೆ ವಾಗ್ಗೆಯ ಸಾಹಿತ್ಯದ ಕೊಡುಗೆಯನ್ನು ವಿಶ್ವಸಾಹಿತ್ಯಕ್ಕೆ ನೀಡಿದ್ದಾರೆ. ಹೀಗೆ ಇಂತಹ ಅನುಭಾವಿಗಳ ಅನುಭವ ಪದಗಳ ಅನುಪಮ ಕೊಡುಗೆಯನ್ನು ನೀಡಿ ಆದ್ಯರೆನಿಸಿಕೊಂಡಿದ್ದಾರೆ. ಅಂತಹ ನೀಳಂಗೇಯ ಗೀತೆಗಳನ್ನು 'ಶಿವದಾಸ ಗೀತಾಂಜಲಿ' ಕೃತಿಯಲ್ಲಿ ೧೯೬೩ರಲ್ಲಿ ಅತ್ಯಂತ ಸಮರ್ಪಕವಾಗಿ ಸಂಪಾದಿಸಿಕೊಟ್ಟಿದ್ದಾರೆ. ಈ ಕೃತಿಯ ಸಂಪಾದನೆಗೆ ಮಹಾಲಿಂಗನ ಏಕೋತ್ತರ ಶತಸ್ಥಲ, ಜಕ್ಕಣ್ಣನ ಏಕೋತ್ತರ ಶತಸ್ಥಲ, ಶರಣರ ವಚನ ಮತ್ತು ಹಾಡುಗಳು, ಶಿವಯೋಗ ಪ್ರದೀಪಿಕೆ, ಗಣವಚನ ರತ್ನಾವಳಿಯ ವಿವಿಧ ಪ್ರತಿಗಳನ್ನು ಇಟ್ಟುಕೊಂಡು ಅವುಗಳಿಂದ ೨೪೦ಕ್ಕೂ ಅಧಿಕ ಹಾಡುಗಳನ್ನು ಸಂಗ್ರಹಿಸಿ, ಪಾಠಾಂತರಗಳು ನೀಡಿ ಸಂಪಾದಿಸಿದ್ದಾರೆ. ಒಂದರ್ಥದಲ್ಲಿ ಶರಣರು ವಚನಗಳ ಜೊತೆಗೆ ರಾಗ ತಾಳಗಳನ್ನೊಳಗೊಂಡ ಹಾಡುಗಳನ್ನು ರಚಿಸಿರುವುದನ್ನು ಪ್ರಪ್ರಥಮವಾಗಿ ವಿದ್ವತ್ ಕ್ಷೇತ್ರಕ್ಕೆ ಕೃತಿಯ ಮೂಲಕ ಪರಿಚಯಿಸಿಕೊಡಲಾಗಿದೆ. ಈ ಕೃತಿಯಲ್ಲಿ ಬಸವರಾಜು ಅವರು ತಮ್ಮ ಅಪಾರ ಪಾಂಡಿತ್ಯ, ವಿದ್ವತ್ತಗಳಿಂದ ಹಾಡುಗಳನ್ನು ಪರಿಷ್ಕರಿಸಿ, ಓಲೆಗರಿಗಳಿಗೆ ಪಂಪಭಾರತದಲ್ಲಿ ಸಂಕೇತಗಳನ್ನು ಸೂಚಿಸಿದಂತೆ ಸಂಕೇತಗಳನ್ನು ಸೂಚಿಸಿ ಪದ್ಯಕ್ಕೆ ಸೂಕ್ತವಾದ ವಿವರಣೆಯನ್ನು ಅಡಿಟಿಪ್ಪಣಿಗಳಲ್ಲಿ ನೀಡಿದ್ದಾರೆ. 'ಅ'ಕಾರಾದಿ ಪದ್ಯಗಳನ್ನು ಹಿಂದೆ ಕೊಟ್ಟು ಅರ್ಥಸೂಚಿ, ಗ್ರಂಥಋಣವನ್ನು ನೀಡಿದ್ದಾರೆ. ಶಿವದಾಸ ಗೀತಾಂಜಲಿಯಲ್ಲಿ ಪ್ರಕಟವಾದ ಎಲ್. ಬಸವರಾಜು ಅವರ ಪಾಂಡಿತ್ಯ ಪರಿಶ್ರಮವನ್ನು ಮತ್ತು ಸಂಶೋಧನ ದೃಷ್ಟಿಯನ್ನು ಕನ್ನಡ ಸಾಹಿತ್ಯದ ದಿಗ್ಗಜರುಗಳಾದ ಡಿ.ಎಲ್. ನರಸಿಂಹಾಚಾರ್, ದ.ರಾ.ಬೇಂದ್ರೆ ಮತ್ತು ತೀ.ನಂ.ಶ್ರೀಕಂಠಯ್ಯನವರು ಮುಕ್ತ ಕಂಠದಿಂದ ಪ್ರಶಂಸೆ ಮಾಡಿದ್ದಾರೆ.

ಈ ಗ್ರಂಥಕ್ಕೆ ಬರೆದಿರುವ ಅಭ್ಯಾಸಪೂರ್ಣವಾದ ದೀರ್ಘವಾದ ಪ್ರಸ್ತಾವನೆಯಲ್ಲಿ ಶೈವ-ವೀರಶೈವ, ಸಾಹಿತ್ಯಕ್ಕೆ ಇರುವ ಸಂಸ್ಕೃತದ ಹಿನ್ನೆಲೆ, ವಚನಸಾಹಿತ್ಯ, ವಚನಸಾಹಿತ್ಯದ ಮೇಲೆ ಸಂಸ್ಕೃತದ ಪ್ರಭಾವ, ಗೀತೆಗಳ ಸಂಕಲನ ಮತ್ತು ವ್ಯತ್ಯಾಸ ಸಂಗೀತ, ಸಾಹಿತ್ಯ ನೃತ್ಯಕ್ಕೆ ಶರಣರ ಕೊಡುಗೆ ಹಾಡುಗಳ ಛಂದಸ್ಸು ಹಾಗೂ ಆಕರಗಳ ವಿವರಗಳನ್ನು ವಿವೇಚಿಸಲಾಗಿದೆ. ಗ್ರಂಥದ ಅಧ್ಯಯನಕ್ಕೆ ಅನುಕೂಲವಾಗುವಂತೆ ಅನುಬಂಧ ಭಾಗದಲ್ಲಿ ಪಲ್ಲವಿಗಳ ಆಕಾರಾದಿ, ರಾಗ, ತಾಳಗಳ ಆಕಾರಾದಿ, ರಾಗ, ಲಕ್ಷಣಗಳು ಮೊದಲಾದ ವಿಪುಲ ಸಾಮಗ್ರಿಗಳನ್ನು ಬಸವರಾಜು ಅವರು ತಮ್ಮ ಸಂಪಾದನೆಯಲ್ಲಿ ಒದಗಿಸಿರುವುದನ್ನು ಕಾಣಬಹುದು. ಅಲ್ಲದೇ ಈ ಕೃತಿ ಸಂಪಾದನೆಯ ಮೂಲಕ ಶರಣರ ಹಾಡುಗಳನ್ನು ನೂತನ ವಿಧಾನದಿಂದ ಪರಿಷ್ಕರಿಸಿ ಪ್ರಕಟಿಸಿರುವುದು ಬಹುಶಃ ಗ್ರಂಥಸಂಪಾದನೆಯ ಲೋಕದ ಅತ್ಯದ್ಭುತ ಸಾಹಸ ಹಾಗೂ ಸಂಪಾದನೆಯ ತಂತ್ರ, ಮೌಲ್ಯಗಳ ವಿನೂತನ ಕೊಡುಗೆಯಾಗಿದೆ.

ವಚನ ವಾಙ್ಮಯದ ಚರಿತ್ರೆಯಲ್ಲಿ ಹದಿನೈದನೇ ಶತಮಾನ ಸಂಕಲನ ಯುಗವಾಗಿದೆ. ಈ ಯುಗದ ಮಹತ್ವದ ಕಾಣಿಕೆಗಳೆಂದರೆ ಶೂನ್ಯಸಂಪಾದನೆ. ಈ ಶೂನ್ಯಸಂಪಾದನೆಗಳು ವಚನಗಳನ್ನು ಅರ್ಥೈಯಿಸಿಕೊಂಡು ಅವುಗಳ ಮೂಲಕ ವಚನ ಪರಿಸರವನ್ನು ಸೃಷ್ಟಿಸುವುದಾಗಿದೆ. ಇಂತಹ ಶೂನ್ಯಸಂಪಾದನೆಗಳಲ್ಲಿ ಒಂದಾದ ಮತ್ತು ಮೊದಲನೆಯದಾದ ಶಿವಗಣಪ್ರಸಾದಿ ಮಹಾದೇವಯ್ಯನ. ಪ್ರಭುದೇವರ ಶೂನ್ಯಸಂಪಾದನೆಯನ್ನು ಬಸವರಾಜು ಅವರು ಶಾಸ್ತ್ರೀಯವಾಗಿ ಪರಿಷ್ಕರಿಸಿದ್ದಾರೆ. ಇದನ್ನು ೧೯೬೯ರಲ್ಲಿ ಪರಿಷ್ಕರಿಸಲು ಎರಡು ಹಸ್ತಪ್ರತಿ ಒಂದು ಕಾಗದ ಪ್ರತಿ ಹಾಗೂ ಶ್ರೀ ಭೂಸನೂರಮಠರವರು ಸಂಪಾದಿಸಿದ ಗೋಳೂರು ಸಿದ್ಧವೀರಣ್ಣನ ಶೂನ್ಯಸಂಪಾದನೆಯನ್ನು ಬಳಸಿಕೊಂಡಿದ್ದಾರೆ. ಗೋಳೂರು ಸಿದ್ಧವೀರಣ್ಣ ಮಾಡಿದ ಶೂನ್ಯಸಂಪಾದನೆಯ ಮತ್ತೊಂದು ವೈಶಿಷ್ಟ್ಯವೆಂದರೆ ಪ್ರಸ್ತಾವನೆಯಲ್ಲಿ ಶಿವಗಣಪ್ರಸಾದಿ ಮಹಾದೇವಯ್ಯ, ಹಲಗೆಯಾರ್ಯ (ಕೆಂಚಣ್ಣವೀರಗೋಡೆಯ), ಗುಮ್ಮಳಾಪುರದ ಸಿದ್ಧಲಿಂಗ, ಗೋಳೂರು ಸಿದ್ಧವೀರಣ್ಣನ ಶೂನ್ಯಸಂಪಾದನೆಯ ತೌಲನಿಕ ದರ್ಶನದ ಪಟ್ಟಿಕೆಯನ್ನು ಕೊಟ್ಟಿರುವುದು ವಿಶೇಷವಾಗಿದೆ. ಅಲ್ಲದೇ ಮುಕ್ತಾಯಕ್ಕ ಸಂಪಾದನೆಯಿಂದ ಹಿಡಿದು ಎಲ್ಲಾ ಗುರುಗಳ ಐಕ್ಯದವರೆಗಿನ ಪ್ರತಿಯೊಂದು ಅಧ್ಯಯನಗಳಲ್ಲಿ ಉಕ್ತವಾಗಿರುವ ವಚನಕಾರರ ವಚನ ಮತ್ತು ಪದಗಳನ್ನು ಆಯಾ ಸಂಪಾದನೆಗಳ ವಿನೂತನ ಸಂಗತಿಗಳನ್ನು ಈ ಪಟ್ಟಿಯಲ್ಲಿ ಉಲ್ಲೇಖಿಸಲಾಗಿದೆ. ಅದರಂತೆ ಅಕ್ಕಮಹಾದೇವಿಯ ಪ್ರಸಂಗವನ್ನು ಮಹಾದೇವಿಯ ಗದ್ಯ ಶೂನ್ಯಸಂಪಾದನೆಯ ಜೊತೆಗೆ ಉಳಿದ ಮೂರು ಶೂನ್ಯಸಂಪಾದನೆಗಳಲ್ಲಿಯ ಪಾಠವನ್ನು ಸಂಗ್ರಹಿಸಲಾಗಿದೆ. ಎಲ್. ಬಸವರಾಜು ಅವರ ಸಂಪಾದನೆ ವೈಶಿಷ್ಟವೆಂಬಂತೆ ಮೂಲ ಕವಿಯ ಕಾಲ ಪರಿಸರ ವಿಚಾರ ಕಥಾವಸ್ತು ಮತ್ತು ಕೃತಿಯ ಸ್ವರೂಪ ಇತ್ಯಾದಿ ಅಂಶಗಳನ್ನು ಸಂಶೋಧನಾತ್ಮಕವಾಗಿ ವಿವರವಾಗಿ ಸಂಗ್ರಹಿಸಿ ಪರಿಷ್ಕರಿಸಿ ಸಂಪಾದಿಸಿದ್ದಾರೆ.

ಚಿತ್ರದುರ್ಗ ಬೃಹನ್ಮಠದ ಶೂನ್ಯಸಿಂಹಾಸನದ ಪರಂಪೆಯ ಇಪ್ಪತ್ತು ಜಗದ್ಗುರುಗಳ ಜೀವನ ಚರಿತ್ರೆಯನ್ನೊಳಗೊಂಡ ಮಹಾದೇವನ ಮಹಾಲಿಂಗೇಂದ್ರ ವಿಜಯವನ್ನು ಬಸವರಾಜು ಅವರು ಸಂಪಾದಿಸಿದ್ದು, ಈ ಕೃತಿಯನ್ನು ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯ ಒಂದು ಓಲೆಗರಿಯನ್ನು ಆಧಾರವಾಗಿಟ್ಟು ಸಂಪಾದಿಸಿಕೊಟ್ಟಿದ್ದಾರೆ. (೧೭೭೧) ಈ ಕೃತಿಯು ಮೂವತ್ತು ಸಂಧಿಗಳಿಂದ ಒಡಗೂಡಿ ಎರಡು ಸಾವಿರದ ಅರವತ್ನಾಲ್ಕು ವಾರ್ಧಿಕ ಪದ್ಯಗಳಿವೆ. ಈ ಕೃತಿಯ ವೈಶಿಷ್ಟ್ಯವೆಂದರೆ ಓದುಗ ವರ್ಗಕ್ಕೆ ಚಿತ್ರದುರ್ಗ ಬೃಹನ್ಮಠದ ಶೂನ್ಯಸಿಂಹಾಸನದ ಪರಂಪರೆಯನ್ನು ಹಿಂದಿನಿಂದ ಇಂದಿನವರೆಗೆ ಹಾಗೂ ಇಂದಿನ ಶ್ರೀ ಮಹಾಲಿಂಗ ಜಗದ್ಗುರುವಿನ ಜೀವನ ಚರಿತ್ರೆ ವೀರಶೈವ ಧರ್ಮ ಮತ್ತು ಆಚರಣೆ ಹಾಗೂ ಶಿವಶರಣರ ಕತೆಗಳು ಇವುಗಳನ್ನು ಜನಸಾಮಾನ್ಯರಿಗೂ ಅನುಕೂಲವಾಗುವಂತೆ ನಿರೂಪಿಸಲಾಗಿದೆ. ಶಿವದಾಸ ಗೀತಾಂಜಲಿಯಂತೆ ಈ ಕೃತಿಯಲ್ಲಿಯೂ ೧೫೮ ಪುಟಗಳ ದೀರ್ಘವಾದ ಪ್ರಸ್ತಾವನೆಯನ್ನು ನೀಡಿದ್ದು, ಓದುಗರಿಗೆ ಮಠದ ಶೂನ್ಯಸಿಂಹಾಸನದ ಬಗ್ಗೆ ಸ್ಪಷ್ಟ ಮಾಹಿತಿಯು ದೊರೆಯುತ್ತದೆ. ಒಟ್ಟಾರೆಯಾಗಿ ಈ ಕೃತಿಯಲ್ಲಿ ಸಂಪಾದಕರಾದ ಎಲ್. ಬಸವರಾಜು ಅವರ ಆಳವಾದ ಅಧ್ಯಯನ. ಅಪರಿಮಿತ ಪಾಂಡಿತ್ಯ ಪ್ರತಿಭೆಗಳು ಗೋಚರಿಸುತ್ತವೆ.

ಮಧ್ಯಕಾಲೀನ ಯುಗದಲ್ಲಿ ದಾಸರ ತರುವಾಯ ವಚನಕಾರರಷ್ಟು ತೀವ್ರವಾಗಿ ಸಮಾಜ ಬದಲಾವಣೆಗೈದವರಲ್ಲಿ ಪ್ರಮುಖರಾದವರೆಂದರೆ ಸರ್ವಜ್ಞ. ತ್ರಿಪದಿಗಳನ್ನು ರಚಿಸಿ ಬಸವಾದಿ ಪ್ರಮುಖರ ತತ್ತ್ವ ಚಿಂತನೆಗಳನ್ನು ಅಷ್ಟೇ ಪರಿಣಾಮಕಾರಿಯಾಗಿ ಪ್ರಚಾರಮಾಡಿದ ಸರ್ವಜ್ಞ ಯಾರು? ಯಾವ ಊರು? ಎಂಬುದರ ಬಗ್ಗೆ ಇನ್ನೂ ಉತ್ತರ ಸಿಗದೇ ಇರುವ ಅಸ್ಪಷ್ಟತೆ. ಇಂತಿಷ್ಟೆ ಎಂದು ಸರ್ವಜ್ಞನ ವಚನಗಳಿಂದ ತಿಳಿಸಲು ಸಾಧ್ಯವಾಗಿಲ್ಲ. ಲೆಕ್ಕವಿಲ್ಲದಷ್ಟು ಇರುವ ಸರ್ವಜ್ಞನ ವಚನಗಳನ್ನು ಎಲ್. ಬಸವರಾಜು ಅವರು ಕ್ರಿ.ಶ.೧೬೩೬ರಲ್ಲಿ ಪ್ರತಿ ಮಾಡಿದ ಪ್ರಾಚೀನ ತಾಳೆಗರಿಯ ಗ್ರಂಥವನ್ನು ಆಧಾರವಾಗಿಟ್ಟುಕೊಂಡು ಇಲ್ಲಿಯವರೆಗೂ ಸರ್ವಜ್ಞನೆಂಬ ಅಂಕಿತದ ಅನಾಮಧೇಯ ವಚನ ಅಂಕಿತವನ್ನು ಬಸವರಾಜು ೧೯೮೨ರಲ್ಲಿ ಸಂಪಾದಿಸಿ 'ಪರಮಾರ್ಥ' ಎಂಬ ಹೆಸರಿನ ಶಾಸ್ತ್ರೀಯ ಕೃತಿಯಲ್ಲಿ ಸರ್ವಜ್ಞನೆಂಬ ಕವಿಯು ರಚಿಸಿದ ಈ ತ್ರಿಪದಿಗಳ ಅಂಕಿತವು ಸರ್ವಜ್ಞ ಅಲ್ಲ ಪರಮಾರ್ಥ ಎನ್ನುವ ವಾದವನ್ನು ಸಮರ್ಥಿಸುತ್ತಾ ತಮ್ಮ ಸಂಪಾದಿತ ಕೃತಿಯ ನಾಮವನ್ನೇ 'ಪರಮಾರ್ಥವೆಂದು' ಕರೆದಿದ್ದಾರೆ. ಅಲ್ಲದೇ ಅದಕ್ಕೆ ಸಮರ್ಥನೆಯನ್ನು ಕೊಡುತ್ತಾ ಕ್ರಿ.ಶ.೧೬೩೬ರ ಪ್ರತಿಯನ್ನು ಪ್ರಮುಖ ಆಧಾರವಾಗಿಟ್ಟುಕೊಂಡು ಎರಡು ಓಲೆ ಪ್ರತಿ ಎರಡು ಕಾಗದದ ಪ್ರತಿ ಹಾಗೂ ಅಚ್ಚಾದ ಹಲವು ಪುಸ್ತಕಗಳ ಪಾಠಗಳನ್ನು ತೌಲನಿಕವಾಗಿ ಪರಿಶೀಲಿಸಿ ಈ ಪರಿಷ್ಕರಣವನ್ನು ನಿರ್ವಹಿಸಿದ್ದಾರೆ. ಹಾಗೆಯೇ ಸರ್ವಜ್ಞನ ನಿಜವಾದ ವಚನಗಳು ಕೇವಲ ಸಾವಿರ ವಚನಗಳು ಮಾತ್ರ. ಉಳಿದದ್ದು ಅಂಕಿತಗಳಿಂದ ರಚಿತವಾದ ವಚನಗಳು ಕಾಲದಿಂದ ಕಾಲಕ್ಕೆ ಜನಪದರು ಸರ್ವಜ್ಞನ ಹೆಸರಿನಲ್ಲಿ ಅವನ ವಚನಗಳ ಮಾದರಿಯಲ್ಲಿ ಕಟ್ಟಿದ ಪ್ರಕ್ಷೇಪಗಳೆಂದು ಸ್ಪಷ್ಟಪಡಿಸಿದ್ದಾರೆ. ವಿವಿಧ ಪದ್ಧತಿಗಳನ್ನೊಳಗೊಂಡ ಅನೇಕ ವಚನಗಳು ಸರ್ವಜ್ಞನ ಹೆಸರಿನಲ್ಲಿ ಸಿಗುತ್ತದೆ. ಇಲ್ಲಿ ಸಂಪಾದಕರಿಗೆ ವಿವಿಧ ಪದ್ಧತಿಗಳ ವಚನಗಳ ಸಂಪಾದನೆಗೆ ಸರ್ವಜ್ಞನ ಬಗೆಗಿನ ಆಳವಾದ ಜ್ಞಾನ, ಅವನ ಪದಗಳ ವೈಶಿಷ್ಟ್ಯ ತಿಳಿದಲ್ಲಿ ಮಾತ್ರ ಶುದ್ಧವಾದ ಪದ್ಯಗಳ ಸಂಪಾದನೆಯನ್ನು ಮಾಡಲು ಸಾಧ್ಯ. ಬಸವರಾಜು ಅವರು ಈ ದಿಸೆಯಲ್ಲಿ ಸಾಗಿ ಸರ್ವಮಾನ್ಯವಾದ ಸವಿಸ್ತಾರವಾದ ಪಾಠಾಂತರಗಳಿಂದ ಕೂಡಿದ ವಿದ್ವತ್ತು ಪೂರ್ಣವಾದ ಆವೃತ್ತಿಯನ್ನು ಸಂಪಾದಿಸಿದ್ದಾರೆ. ಹಾಗೆಯೇ ಆಯಾ ಪದ್ಯಗಳ ಅಡಿಯಲ್ಲಿ ಪದ್ಯದ ಪಾಠಾಂತರ ಹಾಗೂ ವಿಶೇಷಾಂಶಗಳನ್ನು ಆಯಾ ವಚನದ ಅಡಿಯಲ್ಲಿಯೇ ಸಣ್ಣ ಅಕ್ಷರಗಳಿಂದ ಮುದ್ರಿಸಲಾಗಿದೆ. ವಚನಗಳ ಕೊನೆಯಲ್ಲಿ ಅದರೆ ಕೃತಿಯ ಅಕಾರಾದಿ ವಚನಗಳನ್ನು ಅರ್ಥಪದಗಳನ್ನು ನೀಡಲಾಗಿದೆ. ಇದು ಸಂಶೋಧಕರಿಗೂ ಹಾಗೂ ಓದುವ ವರ್ಗಕ್ಕೂ ಅತ್ಯಂತ ಅನುಕೂಲವೆನ್ನಬಹುದು. ಹೀಗೆ ಪರಮಾರ್ಥ ಕೃತಿಯ ಜೊತೆಗೆ ಅಭ್ಯಾಸದ ಅನುಕೂಲತೆಯ ದೃಷ್ಟಿಯಿಂದ 'ಸರ್ವಜ್ಞನ ವಚನಗಳು' ಎಂಬ ಶೀರ್ಷಿಕೆಯಲ್ಲಿ ಇನ್ನೊಂದು ಸಂಕಲನವನ್ನು ಪ್ರಕಟಿಸಿದ್ದಾರೆ.

### ವಚನ ಸಾಹಿತ್ಯ ಸಂಪಾದನೆ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಪೂರ್ವವಾದ ಧಾರ್ಮಿಕ, ಸಾಮಾಜಿಕ ಮತ್ತು ಸಾಹಿತ್ಯಕ ಚಳುವಳಿಯು ನಡೆದ ಕಾಲಮಾನ ಹನ್ನೆರಡನೆ ಶತಮಾನ ಆ ಚಳುವಳಿಯ ಮೂಲಕ ದಾಖಲೆಯಾಗಿ ಉಳಿದಿರುವ ಸ್ವತ್ತೆಂದರೆ ವಚನಸಾಹಿತ್ಯ. ಅಂದು ಕ್ರಾಂತಿಗೆ ಕಾರಣವಾದ ಈ ವಚನಗಳನ್ನು ಅಂದು ಬಸವಾದಿ ಪ್ರಮಥರಾದ ಅಕ್ಕಮಹಾದೇವಿ

ಅಲ್ಲಮಪ್ರಭು, ಜೇಡರ ದಾಸಿಮಯ್ಯ, ಅಂಬಿಗರ ಚೌಡಯ್ಯನಂತಹ ಅನೇಕ ಶರಣರು ಕನ್ನಡ ನಾಡಿಗೆ ವಚನವೆಂಬ ಸಾಹಿತ್ಯ ಪ್ರಕಟವನ್ನು ನೀಡಿದ್ದಾರೆ. ಇಂದೂ ಓದುವ ವರ್ಗಕ್ಕೆ ವಚನಗಳು ಸಿಗುತ್ತಿರುವುದು ಬಸವರಾಜು ಅವರಂಥವರ ಸಂಪಾದನೆಗಳಿಂದ. ಬಸವರಾಜು ಅವರು 'ವಚನಸಾಹಿತ್ಯ' ಕುರಿತು ವಿದ್ವತ್ ಪೂರ್ಣವಾದ ಕೆಲಸವನ್ನು ಮಾಡಿದ್ದಾರೆ. ವಿವಿಧ ಶರಣರ ವಚನಗಳನ್ನು ವಿವಿಧ ಓಲೆಗರಿ ಹಾಗೂ ವಿವಿಧ ಆವೃತ್ತಿಗಳಿಂದ ಆಯ್ದು ಸಂಕಲಿಸಿ ಪಾಠಾಂತರಗಳನ್ನು ಗುರುತಿಸಿ ಶುದ್ಧ ವಚನಗಳನ್ನಾಗಿ ಪರಿವರ್ತಿಸಿ ಸಂಪಾದಿಸಿದ್ದಾರೆ. ಒಂದರ್ಥದಲ್ಲಿ ಹೇಳುವುದಾದರೆ, ವಚನಸಾಹಿತ್ಯ ಸಂಪಾದನೆಯ ಕ್ಷೇತ್ರದಲ್ಲಿ ಕಾಣುವ ದೊಡ್ಡ ಹೆಸರು ಬಸವರಾಜು ಅವರದು. ವಚನ ಸಾಹಿತ್ಯಕ್ಕೆ ಪುನಶ್ಚೇತನವನ್ನು ತಂದುಕೊಟ್ಟ ಫ.ಗು.ಹಳಕಟ್ಟಿ ಅವರ ತರುವಾಯ ಕಾಣುವ ಮತ್ತೊಂದು ಹೆಸರು ಎಲ್.ಬಸವರಾಜು ಅವರದು. ಪ್ರಮುಖ ವಚನಕಾರರ ವಚನಗಳನ್ನು ಶಾಸ್ತ್ರೀಯವಾಗಿ ಓದುಗರಿಗೆ ಅನುಕೂಲವಾಗಿ ಸಂಪಾದಿಸಿದ ಶ್ರೇಯಸ್ಸು ಬಸವರಾಜು ಅವರಿಗೆ ಸಲ್ಲಿಸುತ್ತದೆ. ಅವರು ಸಂಪಾದಿಸಿದ ವಚನ ಕೃತಿಗಳ ಸ್ವರೂಪವನ್ನು ಈ ಕೆಳಗಿನಂತೆ ಸಂಕ್ಷೇಪಿಸಬಹುದು.

ವಚನಕಾರರಲ್ಲಿ ಕಾಣುವ ದಿಗ್ಗಜ ಬಸವಣ್ಣನವರ ಸುಮಾರು ನಾಲ್ಕುನೂರಾ ಐವತ್ತೆರಡು ವಚನಗಳ ಸಂಕಲನ ಕೃತಿಯಾದ 'ಬಸವಣ್ಣನವರ ವಚನಗಳು' ಎಂಬ ಗ್ರಂಥವನ್ನು ೧೯೫೨ರಲ್ಲಿ ಪ್ರಕಟಿಸಿದ್ದಾರೆ. ಇವರ ಪೂರ್ವದಲ್ಲಿ ಫ.ಗು.ಹಳಿಕಟ್ಟಿ (೧೯೨೬) ಬಸವಣ್ಣನ ವಚನಗಳನ್ನು ಸಂಪಾದಿಸಿದ್ದಾರೆ. ಈ ಎರಡು ಸಂಪಾದನೆಗಳನ್ನು ಆಧಾರವಾಗಿಟ್ಟುಕೊಂಡು ಷಟ್‌ಸ್ಥಲ ಮಾದರಿಯ ವಚನಗಳನ್ನು ಬಸವರಾಜು ಅವರು ಸಂಪಾದಿಸಿದ್ದಾರೆ. ಪ್ರಸ್ತಾವನೆಯಲ್ಲಿ ಅಭ್ಯಾಸಪೂರ್ಣವಾದ ಕೃತಿಯ ಪೀಠಿಕೆ ಇದೆ. ಇದರಲ್ಲಿ ಬಸವಣ್ಣನ ಜೀವನ ಸಾಧನೆ ಹಾಗೂ ಅವನ ವಚನಗಳ ವಿಮರ್ಶೆ ಇದೆ. ಕೃತಿಯ ಅಂತ್ಯದಲ್ಲಿ ವಚನಗಳ ಆಕಾರಾದಿ ಹಾಗೂ ಅರ್ಥಕೋಶವನ್ನು ಕೊಡಲಾಗಿದೆ. ಇದು ಓದುಗರಿಗೆ ಅತ್ಯಂತ ಸೂಕ್ತವಾದುದಾಗಿದೆ. ಹಾಗೆಯೇ ೧೯೯೦ರಲ್ಲಿ ಮತ್ತೇ ಬಸವರಾಜು ಅವರು ಬಸವಣ್ಣನವರ ವಚನಗಳ ಬಗೆಗಿನ ಅಧ್ಯಯನವನ್ನು ಮುಂದುವರೆಸಿ ನಾಲ್ಕು ಓಲೆಗರಿಗಳ ಸಹಾಯದಿಂದ ೯೬೧ ವಚನಗಳನ್ನು ಬಸವಣ್ಣನ ಷಟ್‌ಸ್ಥಲ ವಚನಗಳು ಎಂಬ ಶೀರ್ಷಿಕೆಯಲ್ಲಿ ಸಂಸ್ಕರಿಸಿ ಸಂಪಾದಿಸಿದ್ದಾರೆ. ಈ ಕೃತಿಯ ಒಳಗೆ ದೀರ್ಘವಾದ ಪ್ರಸ್ತಾವನೆಯಿದ್ದು, ಪದ್ಯಗಳ ಅಂದರೆ ವಚನ ಸಹ ಚಿಂತನವೆಂಬ ವ್ಯಾಖ್ಯಾನವನ್ನು ತಿಳಿಗನ್ನಡದಲ್ಲಿ ಬರೆದಿದ್ದಾರೆ. ಅಲ್ಲದೇ ಅನುಬಂಧದಲ್ಲಿ ಅರ್ಥಪದಕೋಶ ಅಕಾರಾದಿ ವಚನಗಳ ಸಂದಿಗ್ಧತೆ ಕಂಡುಬಂದಲ್ಲಿ ಅದಕ್ಕೆ ಸೂಕ್ತವಾದ ಅಡಿಟಿಪ್ಪಣಿಯನ್ನು ನೀಡಲಾಗಿದೆ. ಈ ಎರಡು ಕೃತಿಗಳು ಬಸವಣ್ಣನ ವಚನಗಳ ವಿಚಾರಗಳ ಬಗೆಗೆ ಉಪಯುಕ್ತ ಗ್ರಂಥಗಳಾಗಿವೆ.

'ಅಲ್ಲಮನ ವಚನಚಂದ್ರಿಕೆ' ಈ ಗ್ರಂಥವು ಹುಬ್ಬಳ್ಳಿ ಮೂರುಸಾವಿರಮಠದ ಸಹಯೋಗದಲ್ಲಿ ಬಸವರಾಜು ಅವರು ಸಂಪಾದಿಸಿದ ಕೃತಿ ಇದಾಗಿದೆ. ಬಸವರಾಜು ಅವರಿಗೆ ಸಂಪಾದನೆಯಲ್ಲಿ ಅಪಾರ ಮನ್ನಣೆಯನ್ನು ತಂದುಕೊಟ್ಟ ಅತ್ಯಮೂಲ್ಯವಾದ ಕೃತಿ ಇದಾಗಿದೆ. ಈ ಕೃತಿಯು ೧೯೬೦ ಹಾಗೂ ೧೯೮೭ರಲ್ಲಿ ಪರಿಷ್ಕರಣೆಯನ್ನು ಪಡೆದುಕೊಂಡು ಮುದ್ರಿತವಾಗಿದೆ. ಶ್ರೀಯುತರು ಈ ಕೃತಿಯ ಸಂಪಾದನೆಗೆ ಅಲ್ಲಮನ ವಚನಗಳನ್ನು ಓಲೆ ಮತ್ತು ಕಾಗದದ ಪ್ರತಿಗಳಿಂದ ಸಂಗ್ರಹಿಸಿದ್ದಾರೆ. ಇದರ ಜೊತೆ ಸಂಪಾದನೆಗೆ ಪೂರಕವಾಗಿ ಮಹಾಲಿಂಗನ ಏಕೋತ್ತರ

ಷಟಸ್ಥಲ, ಗಣಭಾಷಿಕ ರತ್ನಮಾಲೆ, ಬಸವ ಬಿರುದಾವಳಿ ಮಂತ್ರಿ ಸ್ತೋತ್ರದ ವಚನಗಳು. ಲಿಂಗಲೀಲಾ ವಿಲಾಸಚಾರಿತ್ರ್ಯ, ಪ್ರಭುಲಿಂಗ ಲೀಲೆ ಹಾಗೂ ಸಿಂಗಿರಾಜ ಪುರಾಣಗಳಲ್ಲಿ ಸೇರಿಕೊಂಡ ನಿರ್ದಿಷ್ಟವಾದ ಅಲ್ಲಲ್ಲಿ ಅಡಗಿರುವ ವಚನಗಳನ್ನು ಸಂಶೋಧಿಸಿ ಸಂಪಾದಿಸಿ ಪ್ರಕಟಿಸಿದ್ದಾರೆ. ಹಳಕಟ್ಟಿಯವರು ಸಂಪಾದಿಸಿರುವ ಕೃತಿಯು ಒಡಗೂಡಿ ಸುಮಾರು ಇಪ್ಪತ್ತೇಳು ಪುಸ್ತಕಗಳನ್ನು ಪ್ರಸ್ತುತ ಅಲ್ಲಮನ ವಚನಚಂದ್ರಿಕೆಗೆ ಬಳಸಿಕೊಂಡಿದ್ದಾರೆ. ಅಧಿಕ ವಚನಗಳನ್ನು ಮತ್ತೆ ಇಪ್ಪತ್ತು ಆಕರಗಳಿಂದ ಸಂಗ್ರಹಿಸಿದ್ದಾರೆ. ಹೀಗೆ ಹಲವು ಆಕರಗಳನ್ನು ಬಳಸಿಕೊಳ್ಳುವುದರ ಜೊತೆಗೆ ಪದ್ಯದ ಕೆಳಗೆ ವಿಸ್ತಾರವಾದ ಪಾಠಬೇಧಗಳನ್ನು, ಅವುಗಳ ಅನುಪೂರ್ವಿಯ ವ್ಯತ್ಯಾಸ ವಿವರಗಳನ್ನು ಸಣ್ಣ ಗಾತ್ರದ ಅಕ್ಷರಗಳಲ್ಲಿ ಕೊಡಲಾಗಿದೆ. ಒಟ್ಟು ೧೩೯೫ ವಚನಗಳನ್ನು ತುಂಬಾ ಶ್ರಮವಹಿಸಿ ಅಷ್ಟೇ ನೂತನ ಅಂದರೆ ಆಧುನಿಕ ವಿಧಾನವನ್ನು ಅನುಸರಿಸಿ ಸಂಪಾದಿಸಲಾಗಿದೆ. ಅತ್ಯಂತ ಕ್ಲಿಷ್ಟ ವಚನಗಳನ್ನು ಒಳಗೊಂಡ ಅಲ್ಲಮನ ವಚನಗಳ ಪಾಠಬೇಧವನ್ನು ಆಳವಾಗಿ ಪರಿಷ್ಕರಿಸಿ, ಓದುಗರಿಗೆ ಸುಲಭವಾಗಿ ಗ್ರಾಹ್ಯವಾಗುವಂತೆ ಸಹಕರಿಸಿದ್ದಾರೆ. ಅಭ್ಯಾಸಪೂರ್ಣವಾದ ಪ್ರಸ್ತಾಪನೆಯಲ್ಲಿ ಓದುಗರಿಗೆ ಅನುಕೂಲವಾಗುವಂತೆ ವಚನ ಸಾಹಿತ್ಯದ ಪ್ರಾಚೀನತೆ, ಅದರ ಉಗಮ ಮತ್ತು ವಿಕಾಸ ಅಲ್ಲಮನ ವಚನಗಳ ಸ್ವರೂಪ ಪ್ರಸ್ತುತ ಪರಿಷ್ಕರಣಕ್ಕೆ ಬಳಸಿಕೊಂಡಿರುವ ಆಕರಗಳ ಸ್ವರೂಪ ಹಾಗೂ ಅಲ್ಲಮನ ಜೀವನ ವಿವರಣೆಗಳನ್ನು ಸಾಧಾರಣವಾಗಿ ವಿವೇಚಿಸಲಾಗಿದೆ. ಕೃತಿಯ ಕೊನೆಯಲ್ಲಿ ಪಾರಿಭಾಷಿಕ ಪದಕೋಶ ಆ ಪದಗಳ ಅರ್ಥಪೂರ್ಣ ವಿವರಣೆ, ವ್ಯಕ್ತಿ, ನಾಮ, ಸ್ಥಳ, ನಾಮಸೂಚಿ, ಬೆಡಗಿನ ಪದಕೋಶ ಹಾಗೂ ಅವುಗಳ ಭಾವಾನುವಾದ, ಅರ್ಥಕೋಶ ಇವು ಅನುಬಂಧದಲ್ಲಿ ಸೇರಿಕೊಂಡಿವೆ. ಓದುಗನಿಗೆ ಓದುವ ಸಂದರ್ಭದಲ್ಲಿ ಎಲ್ಲಿಯೂ ಅಡಚಣೆಯಾಗದಂತೆ ಕ್ರಮಬದ್ಧವಾಗಿ ಸಾಧನ ಸಾಮಗ್ರಿಗಳನ್ನು ನೀಡುತ್ತಾ ಹೋಗಿದ್ದಾರೆ. ಒಟ್ಟಾರೆಯಾಗಿ ಅಲ್ಲಮನ ಬಗೆಗಿನ ವಚನಗಳ ಸಂಪೂರ್ಣ ಅಧ್ಯಯನವು ಎಲ್ಲಿಯೂ ಎಡೆಯಿಲ್ಲದೆ ಸಂದೇಹಕ್ಕೆ ಆಸ್ಪದವಿಲ್ಲದೆ ಕಂಡುಬರುತ್ತದೆ.[೬]

ಬಸವಣ್ಣನ ಷಟಸ್ಥಲ ವಚನಗಳಂತೆ ಅಲ್ಲಮನ ಷಟಸ್ಥಲ ಮಾದರಿಯ ೫೦೪ ವಚನಗಳನ್ನು 'ಅಲ್ಲಮನ ವಚನಗಳು' ಎಂಬ ಹೆಸರಿನಡಿಯಲ್ಲಿ ಸಂಸ್ಕರಿಸಿ (೧೯೬೯-೭೦)ರಲ್ಲಿ ಸಂಪಾದಿಸಿದ್ದಾರೆ. ಈ ಕೃತಿಯ ವೈಶಿಷ್ಟ್ಯವೆಂದರೆ ಪಾಠಾಂತರಗಳನ್ನು ಸಂಪೂರ್ಣವಾಗಿ ಕೈಬಿಟ್ಟು ಈಗಾಗಲೇ ಜನಪ್ರಿಯವಾಗಿರುವ ಹಾಗೂ ಸುಲಭವಾಗಿ ಗ್ರಾಹ್ಯವಾಗಿರುವ ವಚನಗಳನ್ನು ಆಯ್ದುಕೊಂಡು ಸಂಕಲನಮಾಡಿ ಸಂಪಾದಿಸಲಾಗಿದೆ. ಅಲ್ಲಮನ ವಚನ ಚಂದ್ರಿಕೆಯು ಸಮಗ್ರವಾಗಿ ಅಲ್ಲಮ ವಚನಸಾಹಿತ್ಯದ ಬಗೆಗಿನ ಮಾಹಿತಿಯನ್ನು ನೀಡಿದೆ. ಅಲ್ಲಮನ ವಚನಗಳು ಅಷ್ಟೇ ಹಿತಕರವಾದ ವಚನಗಳ ಆಯ್ದ ಸಂಕಲನವಾಗಿದೆ. ಕನ್ನಡ ಸಾಹಿತ್ಯದಲ್ಲಿ ಮೊದಲ ಕವಿಯತ್ರಿಯಾದ ಅಕ್ಕಮಹಾದೇವಿಯು ಅನೇಕ ಅಮೂಲ್ಯ ವಚನಗಳ ಆಗರ. ಚನ್ನಮಲ್ಲಿಕಾರ್ಜುನನ್ನೇ ದೈವವೆಂದು. ಪತಿಯೆಂದು ಬಗೆದು ಅವನನ್ನು ಅರಸುತ್ತಾ ಆ ಅಂಕಿತದಲ್ಲಿ ರಚಿಸಿದ್ದಾಳೆ. ಓಲೆಗರಿಗಳ ಆದಿಯಾಗಿ ವಿವಿಧ ಸಂಪಾದನೆಗಳಲ್ಲಿ ಅಡಗಿದ ಅನೇಕ ವಚನಗಳನ್ನು ಎಲ್. ಬಸವರಾಜು ಅವರು ವಿವಿಧ ಆಕರಗಳಿಂದ ಆಯ್ದು ಸಂಗ್ರಹಿಸಿ ಪರಿಷ್ಕರಿಸಿ 'ಅಕ್ಕನ ವಚನಗಳು' ಎಂಬ ಹೆಸರಿನಲ್ಲಿ ೧೯೬೬-೧೯೭೦ರಲ್ಲಿ ಸಂಪಾದಿಸಿದ್ದಾರೆ. ಅಕ್ಕನ ವಚನಗಳನ್ನು ಪರಿಷ್ಕರಿಸಲು ಹರಿಹರನ ಉಡಿತಡಿಯಲ್ಲಿ ಮಹಾದೇವಿಯಕ್ಕನ ಪುರಾಣ ಹಾಗೂ ಶೂನ್ಯಸಂಪಾದನೆಗಳು ಮುಂತಾದ ಹದಿನಾರು

ಪ್ರಾಚೀನ ಆಕರಗಳನ್ನು ಹಾಗೂ ಅನೇಕ ಓಲೆಗರಿಗಳನ್ನು ಬಳಸಿಕೊಂಡಿದ್ದಾರೆ. ಗ್ರಂಥ ಭಾಗದಲ್ಲಿ ವಚನದ ಪಾಠ ಅದರ ಕೈಗೆ ಪಾಠಾಂತರಗಳನ್ನು ಉಲ್ಲೇಖಿಸುವ ಕ್ರಮವಿದೆ. ಈ ಗ್ರಂಥದಲ್ಲಿ ಒಟ್ಟು ೩೬೧ ವಚನಗಳನ್ನು ಸಂಸ್ಕರಿಸಿದ್ದಾರೆ. ಇಷ್ಟು ಪ್ರಮಾಣದಲ್ಲಿ ಯಾವುದೇ ಸಂಪಾದಕರು ಸಂಪಾದಿಸಿರಲಿಲ್ಲ. ಮೊದಲಬಾರಿಗೆ ಎಲ್. ಬಸವರಾಜು ಅವರಲ್ಲಿ ಕಂಡುಬರುತ್ತದೆ. ಇಲ್ಲಿ ಶಿವದಾಸ ಗೀತಾಂಜಲಿ ಮತ್ತು ಅಲ್ಲಮನ ವಚನ ಚಂದ್ರಿಕೆ ಸಂಪಾದನ ಮಾದರಿಯನ್ನು ಅನುಸರಿಸಲಾಗಿದೆ. ಗ್ರಂಥದ ಆರಂಭದಲ್ಲಿ ಕಾಲು ಶತಮಾನದ ವಚನ ಸಾಹಿತ್ಯವನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಅದರ ಜೊತೆ ಅಕ್ಕನ ಜೀವನ ಹಾಗೂ ವಚನಗಳ ಅಂಕಿತದ ಜೊತೆ ವಚನ ವಿಮರ್ಶೆಯನ್ನು ಅಳವಡಿಸಲಾಗಿದೆ. ಹಿಂದಣ ಗ್ರಂಥಗಳ ಮಾದರಿಯಲ್ಲಿ ವಚನಗಳ ಅಕರಾದಿ ಅರ್ಥಕೋಶ ವಿಶೇಷ ಪದಸೂಚಿ ಮತ್ತು ಕೆಲವು ವಚನಗಳ ವ್ಯಾಖ್ಯಾನ ಭಾಗಗಳಿವೆ. ಒಟ್ಟಾರೆ ಅಕ್ಕಮಹಾದೇವಿಯಕ್ಕನ ಬಗೆಗಿನ ಅತ್ಯುತ್ತಮ ಗ್ರಂಥ ಇದಾಗಿದೆ.

ಅಕ್ಕನ ವಚನಗಳಂತೆ ವಚನಕಾರರ ಅಧ್ಯಯನ ಜೇಡರ ದಾಸಿಮಯ್ಯನ ಅನೇಕ ವಚನಗಳನ್ನು 'ದೇವರದಾಸಿಮಯ್ಯ ವಚನಗಳು' ಎಂಬ ಶೀರ್ಷಿಕೆಯ ಅಡಿಯಲ್ಲಿ ಒಟ್ಟಾರೆ ಹದಿನಾಲ್ಕು ಆಕರಗಳನ್ನು ಬಳಸಿಕೊಂಡು ಸಂಪಾದಿಸಿದ್ದಾರೆ. ಇದನ್ನು ೧೯೭೦ರಲ್ಲಿ ಸಂಪಾದಿಸಿದ್ದು, ಮತ್ತೊಮ್ಮೆ ಈ ಕೃತಿಯು ಆವೃತ್ತಿಯನ್ನು ಕಂಡಿದೆ. ಅಕ್ಕನ ವಚನಗಳ ಕೃತಿಯ ಮಾರ್ಗವನ್ನು ಅನುಸರಿಸಲಾಗಿದ್ದು, ಅಭ್ಯಾಸಪೂರ್ಣವಾದ ಪೀಠಿಕೆ, ಅಡಿಟಿಪ್ಪಣಿಗಳು, ಅರ್ಥಕೋಶಗಳೊಡನೆ ಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ.

**ಶಾಸ್ತ್ರ ಕೃತಿಗಳ ಸಂಪಾದನೆ**

ಪ್ರಾಚೀನಕಾವ್ಯ, ಮಧ್ಯಕಾಲೀನ ಗ್ರಂಥ ವಚನಸಾಹಿತ್ಯ ಬಗೆಗಿನ ಸಂಪಾದನೆಯನ್ನು ಶಾಸ್ತ್ರೀಯವಾಗಿ ಸಂಪಾದಿಸಿದ ಎಲ್. ಬಸವರಾಜು ಅವರು ಶಾಸ್ತ್ರ ಗ್ರಂಥಗಳನ್ನು ಅಷ್ಟೇ ಪ್ರಮಾಣಿಕವಾಗಿ ಸಂಪಾದಿಸಿಕೊಟ್ಟಿದ್ದಾರೆ. ಪ್ರಮುಖ ಶಾಸ್ತ್ರಗ್ರಂಥಗಳ ಕನ್ನಡ ಛಂದಸ್ಸು ಕೇಶಿರಾಜನ ಶಬ್ದಮಣಿದರ್ಪಣದಂತಹ ಕೃತಿಗಳನ್ನು ಸಂಪಾದಿಸುವುದರ ಮೂಲಕ ಹೇಗೆ ಶಾಸ್ತ್ರ ಕೃತಿಯನ್ನು ಸಂಪಾದಿಸಬೇಕೆನ್ನುವುದನ್ನು ತಿಳಿಸಿಕೊಟ್ಟಿದ್ದಾರೆ. ಒಟ್ಟಾರೆಯಾಗಿ ಹೇಳುವುದಾದರೆ ಈ ಎರಡು ಕೃತಿಗಳ ಸಂಪಾದನೆಗಳೂ ಗ್ರಂಥಸಂಪಾದನೆಯ ಇತಿಹಾಸದ ಮೈಲುಗಲ್ಲುಗಳು ಎಂದೇ ಹೇಳಬಹುದು.

೧೯೭೪ರಲ್ಲಿ ಬಸವರಾಜು ಅವರು "ಕನ್ನಡ ಛಂದಸ್ಸು ಸಂಪುಟ"ವನ್ನು ಸಂಪಾದಿಸುವುದರ ಮೂಲಕ ಹೇಗೆ ಒಂದು ಕೃತಿಯನ್ನು ಸಂಪಾದಿಸಬೇಕೆಎಂಬುದನ್ನು ತಿಳಿಸಿಕೊಟ್ಟಿದ್ದಾರೆ. ಈ ಕೃತಿಯ ಸಂಪಾದನೆಗೆ ಹಳಗನ್ನಡದ ಪ್ರಮುಖ ಛಂದೋಗ್ರಂಥಗಳಾದ ನಾಗವರ್ಮನ ಛಂದೋಂಬುದಿ, ಈಶ್ವರ ಕವಿಯ ಕವಿಜಿಹ್ವಾಬಂಧನ, ಗುಣಚಂದ್ರನ ಛಂದಸ್ಸು ಮತ್ತು ವೀರಭದ್ರನ ಸಂಧಿ ಛಂದೋರ್ಣವ ಈ ನಾಲ್ಕು ಗ್ರಂಥಗಳನ್ನು ತೆಗೆದುಕೊಳ್ಳುವುದರ ಜೊತೆಗೆ ಪರಿಷ್ಕೃತ ಪೂರ್ಣಪಾಠ, ವ್ಯಾಖ್ಯಾನ, ಟಿಪ್ಪಣಿ, ಪುಸ್ತಕ ಸಾಮಗ್ರಿಗಳೊಡನೆ ಶಾಸ್ತ್ರೀಯವಾಗಿ ಸಿದ್ಧಪಡಿಸಲಾಗಿದೆ. ಬಸವರಾಜು ಅವರ ಪೂರ್ವದಲ್ಲಿ ನಾಗವರ್ಮನ ಪ್ರಾಚೀನ ಛಂದೋಗ್ರಂಥದ ಛಂದೋಂಬುದಿಯನ್ನು ಕಿಟೆಲ್‌ರವರು ೧೮೭೫ರಲ್ಲಿ ಎಚ್.ಎಸ್. ರಾಮಸ್ವಾಮಿ ಅಯ್ಯಂಗಾರ್ ೧೯೪೬ರಲ್ಲಿ ಎಚ್. ಶೇಷಯ್ಯಂಗಾರ್ ಮತ್ತು ಎಚ್.ಎಸ್. ರಾಮಸ್ವಾಮಿ ಅಯ್ಯಂಗಾರ್ ಜೊತೆಗೂಡಿ ೧೯೬೧ರಲ್ಲಿ ಹಾಗೂ

ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಆರು ಓಲೆ ಮತ್ತು ಕಾಗದ ಪ್ರತಿಗಳನ್ನು ಬಳಸಿಕೊಂಡು ಛಂದೋಂಬುದಿ ಕೃತಿಯನ್ನು ಸಂಸ್ಕರಿಸಿದ್ದಾರೆ. ಈ ಕೃತಿಯು ಛಂದಸ್ಸಿಗೆ ಸಂಬಂಧಿಸಿದ ಅನೇಕ ಉಪಯುಕ್ತ ಅಂಶಗಳನ್ನು ಹೊಂದಿರುವುದರಿಂದ ಎಲ್. ಬಸವರಾಜು ಅವರು ಈ ಎಲ್ಲಾ ಕೃತಿಗಳ ಆವೃತ್ತಿಗಳನ್ನು ಬಳಸಿಕೊಂಡಿದ್ದಾರೆ. ಈಶ್ವಕವಿಯ ಜಿಹ್ವಾಬಂಧನವು ಕಾವ್ಯಕ್ಕೆ ಉಪಯುಕ್ತವಾದ ಅಂಶಗಳನ್ನು ಒಳಗೊಂಡ ಕೃತಿಯಾದರೂ ಅದು ಮುಖ್ಯವಾಗಿ ಪ್ರತಿನಿಧಿಸುವುದು. ಛಂದಸ್ಸನ್ನು ಕುರಿತು, ಇದರ ಪರಿಷ್ಕರಣೆಗಾಗಿ ಅದರ ಹಿಂದಣ ಆವೃತ್ತಿಗಳಾದ ಎಚ್. ಶೇಷಯ್ಯಂಗಾರ್, ಆರ್.ಎಸ್. ಪಂಚಮುಖಿಯವರ ಆವೃತ್ತಿಗಳನ್ನು ಹಾಗೂ ಒಂದು ಓಲೆ ಪ್ರತಿಯನ್ನು ಆಧರಿಸಿ ಸಿದ್ಧಪಡಿಸಲಾಗಿದೆ. ಛಂದಸ್ಸಾರವು ಐದು ಭಾಗಗಳಿಂದ ಕೂಡಿದ ಛಂದಸ್ಸಿನ ಗ್ರಂಥ ಇದರ ಪರಿಷ್ಕರಣೆಗೆ ಅದರ ಹಿಂದಣ ಆವೃತ್ತಿ ಎಂ. ಮರಿಯಪ್ಪಭಟ್ ೧೦೪೧-೪೨ ಹಾಗೂ ಒಂದು ಕಾಗದ ಪ್ರತಿಯನ್ನು ಬಳಸಿಕೊಂಡು ಪರಿಷ್ಕರಿಸಿ ಶಾಸ್ತ್ರೋಕ್ತವಾಗಿ ಸಂಪಾದಿಸಿದ್ದಾರೆ. ಇದರಂತೆ 'ನಂದಿ ಛಂದಸ್ಸು', ಛಂದಸ್ಸಿನ ಬಗೆಗೆ ಒಂದು ಲಘು ಕೃತಿ ಇದರ ಪರಿಷ್ಕರಣೆಗೆ ಎಂ.ಎ. ರಾಮಾನುಜಯ್ಯಂಗಾರರರು ೧೯೦೯ರಲ್ಲಿ ಸಂಪಾದಿಸಿದ ಆವೃತ್ತಿಯ ಜೊತೆಗೆ ಎರಡು ಕಾಗದ ಪ್ರತಿಗಳನ್ನು ಅವಲಂಬಿಸಿ ಪರಿಷ್ಕರಿಸಿದ್ದಾರೆ.

ಹೀಗೆ ಎಲ್. ಬಸವರಾಜು ಅವರ ಪಾಂಡಿತ್ಯ ಪರಿಶ್ರಮಕ್ಕೆ ಮತ್ತೊಂದು ನಿದರ್ಶನವೆಂಬಂತೆ ಅವರು ಸಂಪಾದಿಸಿದ ಈ ಶಾಸ್ತ್ರ ಕೃತಿಯಲ್ಲಿ ನಾಲ್ಕು ಪ್ರಮಾಣೀಭೂತ ಛಂದೋಕೃತಿಗಳ ಸಂಸ್ಕರಣದ ಸಂಕಲನದ ಸಂಪಾದಿತ ಈ ಕೃತಿಯಲ್ಲಿ ವೇಲಂಕರರ 'ಜಯದಾಮನ್' ಮಾದರಿಯಲ್ಲಿ 'ಕನ್ನಡ ಛಂದಸ್ಸಂಪುಟ'ವನ್ನಾಗಿ ಸಂಪಾದಿಸಿದ್ದಾರೆ. ಇದು ಪರಿಷ್ಕೃತ ಪೂರ್ಣಪಾಠ, ನಿರ್ದೇಶನ ವ್ಯಾಖ್ಯಾನ, ಟಿಪ್ಪಣಿ ಪ್ರಸಾರ ಸಂದರ್ಭ ಸಾಮಗ್ರಿ ಮತ್ತು ಹದಿನೇಳು ಉಪಯುಕ್ತ ಅನುಬಂಧಗಳನ್ನು ಹೊಂದಿ ಅಮೂಲ್ಯವಾಗಿದೆ.

ಕನ್ನಡ ಶಬ್ದ ಶಾಸ್ತ್ರ ಇತಿಹಾಸದಲ್ಲಿ ಅನೇಕ ವ್ಯಾಕರಣ ಗ್ರಂಥಗಳು ಬಂದಿದ್ದರೂ ಅವುಗಳಲ್ಲಿ ಎದ್ದು ಕಾಣುವ ಕೃತಿ ಎಂದರೆ ಶಬ್ದಮಣಿದರ್ಪಣ. ಕೇಶಿರಾಜನಿಗಿಂತ ಹಿಂದಿನ ಮತ್ತು ಮುಂದಿನ ಕಾಲಗಳಲ್ಲಿ ಅನೇಕ ಕನ್ನಡ ವ್ಯಾಕರಣ ಗ್ರಂಥಗಳು ಬಂದಿವೆಯಾದರೂ ಅವು ಕೇವಲ ದಾಖಲೆಯಾಗಿ ಮಾತ್ರ ಉಳಿದಿವೆ. ಆದರೆ ಶಬ್ದಮಣಿದರ್ಪಣ ಒಂದೇ ಕನ್ನಡ ಅಕ್ಕರೆಯ ಅಖಂಡ ಪಂಜಾಗಿ ಇಂದಿಗೂ ಉರಿಯುತ್ತಿದೆ. ಕೇಶಿರಾಜನ ಶಬ್ದಮಣಿದರ್ಪಣವು ಹಳಗನ್ನಡದ ಅತ್ಯಂತ ಆಧಾರಭೂತವಾದ ವ್ಯಾಕರಣ ಗ್ರಂಥ ಇಂತಹ ಶ್ರೇಷ್ಠ ವ್ಯಾಕರಣ ಗ್ರಂಥವನ್ನು ಅನೇಕ ಸಂಶೋಧಕರು ಪರಿಷ್ಕರಿಸಿ, ಸಂಪಾದಿಸಿದ್ದಾರೆ. ಎಲ್. ಬಸವರಾಜು ಅವರು ಸಹ ಸಂಪಾದಿಸಿದ್ದು ಅದೊಂದು ಅಮೂಲಾಗ್ರ ಸಾಹಸವೇ ಸರಿ ಎನ್ನಬಹುದು. ಕಾರಣ ಶ್ರೇಷ್ಠ ವ್ಯಾಕರಣದ ಗ್ರಂಥವಾದ ಈ ಕೃತಿಯ ಸಂಪಾದನೆಗೆ ಒಟ್ಟು ೩೭ ಹಸ್ತಪ್ರತಿಗಳನ್ನು ಪರಿಶೀಲಿಸಿದ್ದಾರೆ. ಅವುಗಳಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ೨೦, ಬೆಂಗಳೂರು ವಿಶ್ವವಿದ್ಯಾಲಯದಿಂದ ೧೬, ಕರ್ನಾಟಕ ವಿಶ್ವವಿದ್ಯಾಲಯದಿಂದ ೧೧. ಅವುಗಳಲ್ಲಿ ೨೭ ಓಲೆಗರಿಕಟ್ಟುಗಳು, ಉಳಿದುವು ಕಾಗದ ಪ್ರತಿಯಾಗಿವೆ.

ಶ್ರೀಯುತರು ಶಬ್ದಮಣಿದರ್ಪಣದ ಸಂಪಾದನೆಗೆ ಈ ಓಲೆಗರಿಗಳ ಜೊತೆಗೆ ಕಾಲಾನುಕ್ರಮಕ್ಕೆ ಹಲವು ವಿದ್ವಾಂಸರು ಪ್ರಕಟಿಸಿ, ಪರಿಷ್ಕರಿಸಿದ ಅನೇಕ ಆವೃತ್ತಿಗಳನ್ನು ಬಳಸಿಕೊಂಡಿದ್ದಾರೆ.

"ಜಾರ್ಜ್ ಗ್ಯಾರೇಟ್, ಫರ್ಡಿನೆಂಟ್ ಕಿಟ್ಟೆಲ್, ಮಂಗೇಶರಾವ್, ಮದ್ರಾಸ್ ವಿಶ್ವವಿದ್ಯಾಲಯ ಮುದ್ರಿತ ಪ್ರತಿ ಪ್ರೊ. ಡಿ.ಕೆ. ಭೀಮಸೇನರಾವ್ ಅವರ ಸಂಪಾದಿತ ಕೃತಿ ಒಟ್ಟಾರೆಯಾಗಿ ೬೭ ಹಸ್ತಪ್ರತಿಗಳ ಜೊತೆ ಮೇಲಿನ ಒಂಭತ್ತು ಪರಿಷ್ಕರಣ ಆವೃತ್ತಿಗಳನ್ನು ಬಳಸಿಕೊಂಡು ಸಂಪಾದಿಸಿದ್ದಾರೆ."[೪]

ಹಿಂದಣ ಶಬ್ದಮಣಿದರ್ಪಣದ ಸಂಪಾದನೆಗಳು ಸಂಗ್ರಹವಿಲ್ಲದೆ ಸಂಕ್ಷಿಪ್ತವಾಗಿದ್ದರೆ, ಬಸವರಾಜು ಅವರು ಸಂಪಾದಿತ ಪ್ರತಿಯೂ ವಿಸ್ತೃತವೂ ವ್ಯಾಖ್ಯಾನ ಸಹಿತವೂ ಆಗಿದೆ. ಸೂಕ್ತ ಸಂದರ್ಭಗಳಲ್ಲಿ ಬಳಸಿರುವ ವಿರಾಮ ಚಿಹ್ನೆಗಳು, ಪದವಿಭಜನೆ, ವಿಶೇಷಸೂಚನೆ, ಟಿಪ್ಪಣಿಗಳು, ವ್ಯಾಕರಣದಂತಹ ವಿಷಯದ ಕಾಠಿಣ್ಯತೆಯನ್ನು ಕಡಿಮೆ ಮಾಡಿ ಸುಲಭಗ್ರಾಹ್ಯವಾಗುವಂತೆ ಮಾಡಿವೆ. ಸೂತ್ರ ಮತ್ತು ವೃತ್ತಿಗಳನ್ನು ಪ್ರಯೋಗ ಭಾಗದಿಂದ ಪ್ರತ್ಯೇಕಿಸಿ ಕಾಣುವಂತೆ ಸಣ್ಣ ಅಕ್ಷರಗಳಲ್ಲಿ ಮುದ್ರಿಸಲಾಗಿದೆ. ಒಟ್ಟಾರೆ ೩೪೩ ಪದ್ಯಗಳಿಂದ ಕೂಡಿದ ಈ ಗ್ರಂಥಗಳಲ್ಲಿ ಪ್ರತಿ ಸೂತ್ರಪಕ್ಕದಲ್ಲಿ ಅದರ ಉದ್ದೇಶ ಹೇಳಲಾಗಿದೆ. ಸೂತ್ರಗಳ ಸಂಧಿ ಸ್ಥಾನಾದಿಗಳನ್ನು ಬಿಡಿಸಿ ತೋರಿಸಿದ್ದಾರೆ. ದರ್ಪಣದಲ್ಲಿ ಬರುವ ವಿವಿಧ ಶಬ್ದಗಳನ್ನು ಧಾತು ಪಾಠವನ್ನು ಹಾಗೂ ಪ್ರಯೋಗ ಸಾರವನ್ನು ಅಕಾರಾದಿಯಾಗಿ ಜೋಡಿಸಲಾಗಿದೆ. ಅಭ್ಯಾಸಪೂರ್ಣವಾದ ಪ್ರಸ್ತಾವನೆಯಲ್ಲಿ ಸೂತ್ರ, ವೃತ್ತಿ, ಪ್ರಯೋಗಗಳಿಗೆ ಸಂಬಂಧಿಸಿದ ಪಾಠ ಸಮಸ್ಯೆಗಳನ್ನು ಹಾಗೂ ಹಿಂದಣ ಆವೃತ್ತಿಗಳ ಪರಿಶೀಲನೆ ಮಾಡಲಾಗಿದೆ. ಅಲ್ಲದೆ ಓದುಗರಿಗೆ ಒದಗಲು ಅನುಕೂಲವಾಗುವಂತೆ ಬೇಕಾದ ಸಹಾಯಕ ಸಾಮಗ್ರಿಗಳನ್ನೆಲ್ಲಾ ಇಲ್ಲಿ ಕೊಡಲಾಗಿದೆ. ಇಂತಹ ಸಹಾಯಕ ಸಾಮಗ್ರಿಗಳಲ್ಲಿ ಸೂತ್ರಗಳ ಅಕಾರಾದಿ, ಪರಿಭಾಷೆಯ ಅಕಾರಾದಿ, ಪ್ರಯೋಗ ಮತ್ತು ಆಕರಗಳು ಸಮುಚ್ಚಯ ವಾಕ್ಯಗಳು, ಅನುಬಂಧದಲ್ಲಿ ಸೇರಿಕೊಂಡಿವೆ. ಒಟ್ಟಾರೆಯಾಗಿ ಇಷ್ಟು ಸುಸಂಬದ್ಧವಾಗಿ ಸಂಪಾದಿತವಾದ ಪ್ರತಿ ಮತ್ತೊಂದಿಲ್ಲವೆನ್ನಬಹುದು. ಈ ಕೃತಿಯು ಕನ್ನಡ ವ್ಯಾಕರಣ ಅಧ್ಯಯನಕ್ಕೆ ಹೆಚ್ಚಿನ ನೆರವು ನೀಡುತ್ತದೆ.

**ಕಾವ್ಯ**

ಸಂಪಾದಕರಾಗಿ ಸಾಹಿತ್ಯ ಕ್ಷೇತ್ರಕ್ಕೆ ಸಾಕಷ್ಟು ಕೊಡುಗೆಯನ್ನು ನೀಡಿದ ಎಲ್. ಬಸವರಾಜು ಅವರು ತಮ್ಮ ಸೃಜನಶೀಲ ಪ್ರತಿಭೆಯಿಂದ ಕನ್ನಡ ವಿದ್ವತ್ ಲೋಕಕ್ಕೆ ಎರಡು ಕವನ ಸಂಕಲನಗಳನ್ನು ನೀಡಿದರು. ವಿದ್ವತ್‌ಪೂರ್ಣ ಬರವಣಿಗೆಯಲ್ಲಿ ಗುಪ್ತಗಾಮಿನಿಯಾಗಿದ್ದ ಅವರ ಪ್ರತಿಭೆಯು ಒಂದು ಕಾಲಘಟ್ಟದಲ್ಲಿ ಪೂರ್ಣ ಪ್ರಮಾಣದಲ್ಲಿ ಮೈದೋರಿದ ಪರಿಣಾಮವಾಗಿ 'ಠಾಣಾಂತರ' ಮತ್ತು 'ಜಾಲಾರಿ' ಎಂಬ ವಿಶಿಷ್ಟ ಕವನ ಸಂಕಲನಗಳನ್ನು ಪ್ರಕಟಮಾಡಿದ್ದಾರೆ. ಗ್ರಂಥಸಂಪಾದನಾ ವಲಯದಲ್ಲಿ ಪ್ರಾಚೀನ ಕಾವ್ಯಗಳಿಂದ ಹಿಡಿದು ಶಾಸ್ತ್ರೀಯ ಗ್ರಂಥಗಳವರೆಗಿನ ಅವರ ವಿದ್ವತ್ ಸೃಜನಶೀಲ ಬರವಣಿಗೆಯ ಕಡೆಗೆ ಆಧುನಿಕ ಕಾವ್ಯಗಳತ್ತ ಹೊರಟಿತು. ಅವರ ಪ್ರತಿಭೆಯು ಕೇವಲ ಸಂಪಾದನೆಗೆ ಮಾತ್ರ ಸೀಮಿತವಲ್ಲ. ಅದರ ಹೊರತು ಸ್ವತಂತ್ರ ಕೃತಿಗಳ ನಿರ್ಮಾಣದವರೆಗೂ ಚಾಚಿದೆ ಎಂಬುದಕ್ಕೆ ಸಾಕ್ಷಿ ಈ ಎರಡು ಕವನ ಸಂಕಲನಗಳು. ಹಿಂದಿನಿಂದಲೂ ಕಾವ್ಯಗಳ ಬಗೆಗಿನ ಆಸಕ್ತಿಯಿಂದ ಹಾಗಾಗಿ ವಿರಾಮದ ಸಮಯದಲ್ಲಿ ಕವನ ರಚಿಸುವ ಹವ್ಯಾಸ ಇತ್ತೆಂಬುದನ್ನ 'ಠಾಣಾಂತರ' ಪ್ರಸ್ತಾವನೆಯಲ್ಲಿ ಲೇಖಕರು ವಿವರಿಸುತ್ತಾರೆ.

"ರಾಗಾಂತರ ಕಾವ್ಯ ಸಂಕಲನದಲ್ಲಿ ಒಟ್ಟು ೩೩೮ ಕವಿತೆಗಳಿವೆ. ಈ ಕವಿತೆಗಳು ಪುಟ್ಟ ಪುಟ್ಟ ಮುದುಮುತ್ತುಗಳು ಆಳವಾಗಿ ತಟ್ಟುವ ಅನುಭವ ನುಡಿಗಳು ನಿಸರ್ಗದ ಚೆಲುವಿಗೆ ಮಾರುಹೋದ ಮೇಲುನುಡಿಗಳು. ಗುಟುಕು. ಹಾಕಿ ಹಾಯುವ ಹಾಯುಕುನುಡಿಗಳು. ಹೀಗೆ ಬಗೆ ಬಗೆಯ ನುಡಿಗವಿತೆಗಳಿಂದ ತುಂಬಿರುವ ಕವನ ಸಂಕಲನ ಒಮ್ಮೊಮ್ಮೆ ಗಂಭೀರವಾಗಿ ಕಾಲಜ್ಞಾನವನ್ನು ನುಡಿಸುವುದುಂಟು. ಮೈಸೂರು ಸೀಮೆಯ ಆಡುನುಡಿಯಲ್ಲಿ ಸ್ನೇಹಪೂರ್ಣವಾಗಿ ಸಂಭಾಷಿಸುತ್ತಾ ನಡೆಯುವ ಈ ನುಡಿಗವಿತೆಯಲ್ಲಿ ಒಂದು ಲೀಲಾಭಾವದ ಲಯವಿದೆ. ಇದು ಶಬ್ದಲಯದಲ್ಲಿ ನುಡಿಯುವ ಭಾವ ಲಯ ಅಥವಾ ಲಯ ಎನ್ನಬಹುದು."

ಬಸವರಾಜು ಅವರು ಈ ಕವನ ಸಂಕಲನದಲ್ಲಿ ಸಮಕಾಲೀನ ಕಾವ್ಯಪರಂಪರೆಯ ಸಿದ್ಧಾಂತ ಒಳಸುಳಿಗೆ ಸ್ಪಂದಿಸುತ್ತಾರೆ. ಜೀವಿತಾವಧಿಯಲ್ಲಿ ಕಂಡುಂಡ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ, ದಲಿತ ಪಂಥಗಳ ಒಳತುಡಿತಗಳನ್ನು ಕಂಡಿದ್ದ ಬಸವರಾಜು ಅವರು ತಮ್ಮ ಕಾವ್ಯಧಾರೆಯಲ್ಲಿ ಅವುಗಳ ಸಾರವನ್ನು ಪರೀಕ್ಷಿಸಿದ್ದಾರೆ. ಪ್ರತಿಯೊಬ್ಬ ಕವಿಯೂ ಸಮಕಾಲೀನ ಕಾವ್ಯ ಚಳುವಳಿಗಳಿಂದ ಕಿಂಚಿತ್ತಾದರೂ ಪ್ರಭಾವಿತನಾಗಿಯೇ ಇರುತ್ತಾನೆ ಎಂಬ ಸತ್ಯವನ್ನು ಅವರು ಮನಗಂಡಿದ್ದಾರೆ. ಆದ್ದರಿಂದ ತಮ್ಮ ಕಾವ್ಯದಲ್ಲಿ ನವೋದಯದ ನಿಸರ್ಗ ಪ್ರೇಮ ಮತ್ತು ಸರಳತೆ ನವ್ಯದ ಮುಕ್ತ ಛಂದಸ್ಸು, ದಲಿತ ಕಾವ್ಯದ ತುಡಿತ ಹಾಗೂ ಬಂಡಾಯ ಕಾವ್ಯದ ಸಮತೆಯ ಕನಸು ಇವುಗಳನ್ನು ಗುರುತಿಸಬಹುದು. ಹಾಗೆಯೇ 'ಜಾಲಾರಿ' ಕವನ ಸಂಕಲನವು 'ರಾಗಾಂತರ'ದಂತೆ ಇನ್ನೊರಕ್ಕೊ ವೈಶಿಷ್ಟ್ಯವೆಂದರೆ ಸಮಕಾಲೀನ ಪ್ರಜ್ಞೆ ಮತ್ತು ಸಾಮಾಜಿಕ ಕಾಳಜಿ ಇಲ್ಲಿನ ಕವನದ ಪ್ರಮುಖ ಆಶಯವಾಗಿದೆ. ವ್ಯಂಗ ಮತ್ತು ವಿಡಂಬನೆಗಳು ಕಾವ್ಯಶೈಲಿಗೆ ಮೆರಗನ್ನು ತಂದಿವೆ ಎನ್ನಬಹುದು. ಈ ಎರಡು ಸಂಕಲನಗಳಿಂದ ಬಸವರಾಜು ಅವರು ತಾವೊಬ್ಬ ಸಮರ್ಥ ಕವಿ ಎಂಬುದನ್ನು ಸಾಬೀತುಪಡಿಸಿದ್ದಾರೆ.

### ಅನುವಾದ

ಎಲ್. ಬಸವರಾಜು ಅವರು ಕನ್ನಡ ಭಾಷೆಯ ವಿದ್ವತ್ತಿನ ಜೊತೆಗೆ ಸಂಸ್ಕೃತ, ಹಿಂದಿ, ಇಂಗ್ಲಿಷ್ ಮೊದಲಾದ ಭಾಷೆಗಳ ಪಾಂಡಿತ್ಯವನ್ನು ಪಡೆದಿದ್ದಾರೆ. ಇದಕ್ಕೆ ಸಾಕ್ಷಿ ಎಂಬಂತೆ ಶ್ರೀಯುತರು ಅನುವಾದ ಮಾಡಿದ ಕೃತಿಗಳೇ ಆಧಾರವಾಗಿ ನಿಲ್ಲುತ್ತವೆ. ಬಸವರಾಜು ಅವರ ಬರವಣಿಗೆಯ ಚಿಂತನೆಯು ಕೇವಲ ಒಂದೇ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿಲ್ಲ. ಸಾಹಿತ್ಯದ ವಿವಿಧ ವಲಯಗಳಲ್ಲಿ ತಮ್ಮ ಸಾಧನೆ ಗೈದಿದ್ದಾರೆ. ಕಾವ್ಯಪ್ರತಿಭೆಯನ್ನು ಗೈದ ಬಸವರಾಜು ಅವರು ಕೃತಿಯ ಅನುವಾದದಲ್ಲಿಯೂ ತಮ್ಮ ವಿದ್ವತ್‌ಪ್ರತಿಭೆಯನ್ನು ಪ್ರಕಟಿಸಿದ್ದಾರೆ.

'ಸೌಂದರ್ಯನಂದಾ' ಇದು ಬಸವರಾಜು ಅವರ ಅನುವಾದಿತ ಕೃತಿ. ಭಾಷಾಂತರದ ಹೊಸ ಪ್ರಯೋಗಗಳಿಂದ ಒಡಮೂಡಿದ ಕೃತಿ ಅಶ್ವಘೋಷನ, ಪ್ರಮುಖ ಕೃತಿಯಾಗಿದೆ. ಸೌಂದರ್ಯನಂದಾ ಸಂಸ್ಕೃತದಲ್ಲಿ ರಚಿತವಾದ ಕೃತಿ ಇದನ್ನು ಬಸವರಾಜು ಗದ್ಯಾತ್ಮಕವಾದ ವಚನ, ಕಾವ್ಯ, ಸ್ವರೂಪದಲ್ಲಿ ಭಾಷಾಂತರಿಸಿದ್ದಾರೆ. ಈ ಕೃತಿಯ ಪೂರ್ವದಲ್ಲಿ ವಚನಗಳ ಗದ್ಯಾನುವಾದದಲ್ಲಿ ಪ್ರಯೋಗ ನಡೆಸಿದ್ದಾರೆ. ಈ ಗದ್ಯಾನುವಾದದಲ್ಲಿ ವಿಶೇಷವಾಗಿ ಗಮನಿಸಬೇಕಾದುದು ಗದ್ಯದ ಲಯಗಳು ಅದರಲ್ಲಿಯೂ ವಚನ ಗದ್ಯಲಯಗಳು ಗದ್ಯದ ವಾಕ್ಯಗಳು ಮುರಿದು

ವಚನ ಛಾಯೆಯ ಹಿನ್ನೆಲೆಯಲ್ಲಿ ಆಧುನಿಕ ಗದ್ಯದಲ್ಲಿ ವಚನ ಸ್ವರೂಪ ಗದ್ಯ ಕಟ್ಟಿ ಆ ಗದ್ಯಕ್ಕೊಂದು ಕಾವ್ಯ ಸ್ವರೂಪವನ್ನು ದೊರಕಿಸಿಕೊಟ್ಟಿದ್ದಾರೆ. ಮೂಲಕೃತಿಗೆ ಭಂಗ ಬರದಿರಲೆಂದು ಶ್ರೀಸಾಮಾನ್ಯರಿಗೂ ಸುಲಭವಾಗಿ ಗ್ರಹಿಕೆಯಾಗಲೆಂದು ನಾಟಕೀಯತೆಯನ್ನು ತರುವ ಸಂವಾದಗಳು, ಹೆಚ್ಚು ವ್ಯಾಖ್ಯಾನಿಸುವ ತಲೆಬರಹಗಳು, ಮುಂತಾದ ಪ್ರಯೋಗಗಳು ಚರ್ಚೆಗಳಿಗೆ ಚಾಲನೆ ಕೊಡುತ್ತವೆ.

ಈ ಅನುವಾದಕ್ಕೆ ಸೂಕ್ತವಾದ ಅರ್ಥಯುತವಾದ ಪೀಠಿಕೆಯನ್ನು ನೀಡಿ ಓದುಗರ ವಿವೇಚನೆಗೆ ದಾರಿ ಮಾಡಿಕೊಡುತ್ತಾರೆ. ಈ ಗದ್ಯಾನುವಾದವು ಸಂಪಾದನೆಯಲ್ಲಿ ಮತ್ತು ಭಾಷಾಂತರದಲ್ಲಿ ವಿಶಿಷ್ಟ ಪ್ರಯೋಗವೆನ್ನಬಹುದು.

ಅಶ್ವಘೋಷ ಮತ್ತೊಂದು ಅಮೂಲ್ಯವಾದ ಕೃತಿ 'ಬುದ್ಧಚರಿತೆ'ಯನ್ನು ಬಸವರಾಜು ಅವರು ಸೌಂದರ್ಯನಂದಾ ಮಾದರಿಯಲ್ಲಿ ಅನುವಾದಿಸಿದ್ದಾರೆ. ಬುದ್ಧಚರಿತೆಯಲ್ಲಿ ಬಳಸಿರುವ ಭಾಷೆಯ ಗದ್ಯ ಸ್ವರೂಪ ಹೊಸ ಪ್ರಯೋಗವೇ ಸರಿ. ಇಲ್ಲಿಯೂ ವಚನ ಛಾಯೆ ಕಂಡಿದೆ. ವಚನ, ಮುಕ್ತಕಗಳನ್ನು ಕಾವ್ಯ ಮಾಧ್ಯಮವನ್ನಾಗಿ ಯಾರೂ ಬಳಸಿಲ್ಲ. ಆದರೆ ಭಾಷಾಂತರದ ಈ ಎರಡು ಕಾವ್ಯಗಳು ಗದ್ಯಾತ್ಮಕ ವಚನದಲ್ಲಿದ್ದು ಹೊಸ ಪ್ರಯೋಗವಾಗಿವೆ ಎನ್ನಬಹುದು. ಭಾಷಾಂತರದಲ್ಲಿ ನೇರಾನುವಾದ ರೂಪಾಂತರ, ಶಬ್ದ ಸಹ ಭಾಷಾಂತರ ಹೀಗೆ ಬಗೆ ಬಗೆಯ ಅನುವಾದಗಳಿರುತ್ತವೆ. ಆದರೆ ಇಲ್ಲಿ ಅಲ್ಲಿಯ ಭಾವವನ್ನು ಉಳಿಸಿಕೊಂಡು ಮೂಲ ಕೃತಿಗೆ ಯಾವುದೇ ಭಂಗ ಬರದಂತೆ ವಚನಗಳನ್ನು ಒಡೆದು ಅರ್ಥಭಂಗ ಬರದಂತೆ ಲಯವನ್ನು ಕಂಡುಕೊಂಡು ಓದುಗರಿಗೆ ಸೂಕ್ತವಾಗಿ ಓದಿಕೊಂಡು ಹೋಗುವಂತೆ ಗದ್ಯದ ರೂಪದಲ್ಲಿ ಬುದ್ಧನ ಬಗೆಗಿನ ಕಾವ್ಯ ಹಾಗೂ ಸೌಂದರ್ಯನಂದಾ ಕೃತಿಯನ್ನು ಅನುವಾದಿಸಿದ್ದಾರೆ. ಭಾಷಾಂತರದ ಪ್ರಕ್ರಿಯೆಯಲ್ಲಿ ಇದೊಂದು ವಿನೂತನ ಪ್ರಯೋಗವೇ ಸರಿ. ಸಂಸ್ಕೃತದ ಖ್ಯಾತ ಕವಿಯಾದ ಭಾಸನ ಆರು ಏಕಾಂಕಗಳನ್ನು ವಿವಿಧ ಓಲೆಗರಿಗಳ ಸಹಾಯದಿಂದ ಪರಿಷ್ಕರಿಸಿ, ಕನ್ನಡಕ್ಕೆ ಅನುವಾದಿಸಲಾಗಿದೆ. ಇಲ್ಲಿ ಕನ್ನಡ ಸಂಸ್ಕೃತಿಗೆ ಅನುಗುಣವಾಗಿ ಹೊಂದಿಕೆಯಾಗುವಂತೆ ಆರು ಏಕಾಂಕ ನಾಟಕಗಳನ್ನು 'ಭಾರತರೂಪಕ' ಎಂಬ ಹೆಸರಿನಲ್ಲಿ ಅನುವಾದಿಸಲಾಗಿದೆ. ಅದರಂತೆ ಬಾಸನ ರಾಮಾಯಣ ಆಧಾರಿತ ಮೂರು ನಾಟಕಗಳನ್ನೊಳಗೊಂಡ ರಾಮಾಯಣ ನಾಟಕ 'ತ್ರಿವೇಣಿ' ಎಂಬ ಹೆಸರಿನಡಿ ಅನುವಾದಗೊಂಡಿದೆ. ಇಲ್ಲಿಯ ಅನುವಾದವು ನೇರಾನುವಾದವಲ್ಲ. ಲೇಖಕರ ಪ್ರತಿಭಾ ಸ್ಪರ್ಶದಿಂದ ಸೃಜನಶೀಲ ಕೃತಿಗಳಾಗಿ ಅವತರಿಸಿದೆ. ವಸ್ತು ಮತ್ತು ಅಭಿವ್ಯಕ್ತಿ ದೃಷ್ಟಿಯಿಂದ ಕನ್ನಡ ಸಾಹಿತ್ಯಕ್ಕೆ ಇವು ವಿಶಿಷ್ಟ ಕಾಣಿಕೆಗಳೆಂದೇ ಹೇಳಬಹುದು.

ಶೂನ್ಯಸಂಪಾದನೆಗಳೊಂದಿಗೆ ಗೋಳೂರು ಸಿದ್ಧವೀರಣ್ಣಾರ್ಯನ ಶೂನ್ಯಸಂಪಾದನೆಯನ್ನು ಓದುಗರಿಗೆ ಅನುಕೂಲವಾಗುವಂತೆ ಸರಳೀಕರಣಗೊಳಿಸಿ ಗದ್ಯಾನುವಾದವನ್ನು ಮಾಡಿದ್ದಾರೆ. ಪೂರ್ವದ ಪ್ರಸ್ತಾವನೆ ೪ ಶೂನ್ಯಸಂಪಾದನೆಗಳ ಬಗ್ಗೆ ಸಂಕ್ಷಿಪ್ತ ಮಾಹಿತಿ ಇದೆ. ನಿಜಗುಣಶಿವಯೋಗಿಗಳ ಬಗೆಗಿನ ಕಾವ್ಯವನ್ನು ರಾಘವಾಂಕನ ಸಿದ್ಧರಾಮ ಚಾರಿತ್ರ್ಯ', ಹರಿಶ್ಚಂದ್ರಕಾವ್ಯಗಳನ್ನು ಸರಳ ಗದ್ಯಾನುವಾದ ಮಾಡಿದ್ದು, ಓದುಗರನ್ನು ದೃಷ್ಟಿ ಇಟ್ಟುಕೊಂಡು ಸರಳವಿಧಾನದಲ್ಲಿ ಅನುವಾದಿಸಿದ್ದಾರೆ.

**ಇತರ ಕೃತಿಗಳು**

"ಅಲ್ಲಮನು ಮೈಮೇಲೆ ಬಂದಾಗ" ಎಲ್. ಬಸವರಾಜು ಅವರ ಸ್ವತಂತ್ರ ಸಂಪಾದನೆ ಕೃತಿ. ವೇದೋಪನಿಷತ್ತುಗಳಲ್ಲಿ ಮಾತ್ರವೇ ಅಲ್ಲ ಅದಕ್ಕಿಂತಲೂ ಪೂರ್ವ ಜನಪದ ಸಾಹಿತ್ಯ ಹಿನ್ನೆಲೆಯಲ್ಲಿ ಜಾಗಟೆಯೊಂದೋ ಮುಂಡಿಗೆಯೊಂದೇ ಬೆಡಗಿನ ವಚನವೆಂದೋ ಎಂಬ ಆಶಯವನ್ನು ಅಲ್ಲಮನು ಮೈಮೇಲೆ ಬಂದಾಗ ಎಂಬ ಕೃತಿಯು ಒಳಗೊಂಡಿದೆ.

ಕನ್ನಡ ಸಾಹಿತ್ಯ ಲಿಖಿತಸಾಹಿತ್ಯ ಪರಂಪರೆಯನ್ನು ಆದಿಕವಿ ಪಂಪನಿಂದ ಆರಂಭಿಸುತ್ತೇವೆ. ಪಂಪನ ಪೂರ್ವದಲ್ಲಿ ಕನ್ನಡ ಸಾಹಿತ್ಯ ಸಮೃದ್ಧವಾಗಿ ಬೆಳೆದಿದೆ. ಅಂತಹ ಸಾಹಿತ್ಯವನ್ನು ಪ್ರಸ್ತುತಪಡಿಸುವ ಕೃತಿ "ಪಂಪಪೂರ್ವಯುಗ" ಇದೊಂದು ಎಲ್. ಬಸವರಾಜು ಅವರ ಕಿರುಹೊತ್ತಿಗೆ, ಕಿರುಹೊತ್ತಿಗೆಯಾದರೂ ಬಸವರಾಜು ಅವರ ಜ್ಞಾನ, ಪರಿಶ್ರಮ, ವಿದ್ವತ್ತುಗಳಿಗೆ ಸಾಕ್ಷಿಯಾಗಿದೆ. ಪ್ರಸ್ತುತ ಕೃತಿಯಲ್ಲಿ ಪಂಪಪೂರ್ಣ ಯುಗದ ಸಾಹಿತ್ಯವನ್ನು ಸ್ಥೂಲವಾಗಿ ವಿವರಿಸುತ್ತಾ, ಅಲ್ಲಿನ ಪಾಠಪರಿಷ್ಕರಣ, ಸರಳಾನುವಾದ ಅಡಿಟಿಪ್ಪಣಿ, ಸ್ಥೂಲವಾದ ಪೀಠಿಕೆಯ ಭಾಗವನ್ನು ನೀಡುತ್ತಾರೆ. ಪಂಪನ ಪೂರ್ವದ ಕವಿಗಳಾದ ವಿಮಳೋದಯ, ನಾಗಾರ್ಜುನ, ಜಯಬಂಧು ದುರ್ವಿನೀತ ಅದೇ ರೀತಿ ಗದ್ಯ, ಪದ್ಯಮಿಶ್ರದಿಂದ ಪೂರ್ವದ ಗದ್ಯ ಕಥೆ ಕನ್ನಡಕ್ಕೆ ಚೆತ್ತಣ ಬೆದಂಡೆಗಳ ಪ್ರಸ್ತಾಪ, ಇವು ಸಂಸ್ಕೃತದ ಕಾಳಿದಾಸನ ಪದ್ಯ ಕಾವ್ಯಗಳಿಗಿಂತ (ಹೊರ ಮೈರೀತಿಯಲ್ಲಿ) ಭಿನ್ನವಾಗಿದ್ದವೆಂದು. ಇಂತಹ ವಿಶಿಷ್ಟ ಕಾವ್ಯಬಂಧಗಳನ್ನು ಶ್ರೀವಿಜಯ ಕವೀಶ್ವರ ಪಂಡಿತ ಚಂದ್ರಲೋಕಪಾಲ ಮುಂತಾದವರು ಬರೆದರು. ಎಂಬುದನ್ನು ಸಾಬೀತುಮಾಡುವುದರ ಜೊತೆಗೆ ಕವಿರಾಜಮಾರ್ಗದ ಬಗೆಗೆ ಪ್ರಸ್ತಾಪ ಮಾಡುತ್ತ ಪಂಪಪೂರ್ವ ಯುಗದಲ್ಲಿ ಬೆಳೆದು ಬಂದ ಶಾಸನ ಸಾಹಿತ್ಯದ ಬಗೆಗೆ ವಿವರಿಸುತ್ತಾ ಹೋಗುತ್ತಾರೆ. ಹಲ್ಮಿಡಿ ಶಾಸನ, ಬಾದಾಮಿ ಶಾಸನ, ಚಿತ್ರದುರ್ಗಶಾಸನ, ಕದಂಬರಾಜವರ್ಮನ ಕಲ್ಲುಶಾಸನ, ಶಿವಮೊಗ್ಗ ಮಾವಳ್ಳಿ ಊರಿನ ಬಸ್ತಿಯ ಹಿತ್ತಲಶಾಸನ, ಬೇಗೂರು ಶಾಸನಗಳ ಸ್ಪಷ್ಟ ವಿವರಣೆಯು ಇದೆ.

ಒಟ್ಟಾರೆಯಾಗಿ ಈ ಕೃತಿಯು ಪಂಪಪೂರ್ವ ಯುಗದ ಸಾಹಿತ್ಯದ ಬಗೆಗೆ ಸ್ಪಷ್ಟಾತ್ಮಕ ಮಾಹಿತಿಯನ್ನು ನೀಡುತ್ತದೆ. ಹೀಗೆ ಗ್ರಂಥಸಂಪಾದನೆ, ಕಾವ್ಯ, ಅನುವಾದ ಸ್ವತಂತ್ರ ಕೃತಿಯನ್ನು ನೀಡುವುದರ ಮೂಲಕ ಶ್ರೀಯುತರು, ಸಾಹಿತ್ಯ ಸಿರಿಯಾಗಿ ಈ ಕೆಳಗಿನಂತೆ ನೋಡಬಹುದು.

**ಸಂಶೋಧಿತ ಮತ್ತು ಗ್ರಂಥ ಸಂಪಾದಿತ ಕೃತಿಗಳು**

೧. ಅಕ್ಕನ ವಚನಗಳು

೨. ಅಲ್ಲಮನ ವಚನ ಚಂದ್ರಿಕೆ

೩. ಅಲ್ಲಮ ಪ್ರಭು ವಚನಗಳು

೪. ಆದಿಪುರಾಣ

೫. ಕನ್ನಡ ಛಂದಸ್ಸಂಪುಟ

೬. ತೊರೆವೆ ರಾಮಾಯಣ ಸಂಗ್ರಹ

೭. ದೇವರ ದಾಸಿಮಯ್ಯ ವಚನಗಳು

೮. ಪರಮಾರ್ಥ ಸರ್ವಜ್ಞನ ವಚನಗಳು

೯. ಪಂಪನ ಆದಿಪುರಾಣ ಕಥಾಮೃತ

೧೦. ಪಂಪನ ಶೃಂಗಾರ

೧೧. ಪಂಪನ ಸರಳ ಆದಿಪುರಾಣ

೧೨. ಬಸವ ವಚನಾಮೃತ (ಭಾಗ ೨)

೧೩. ಬಸವಣ್ಣನವರ ವಚನಗಳು

೧೪. ಬಸವಣ್ಣನವರ ಷಟ್‌ಸ್ಥಲ ವಚನಗಳು (ಸಹಚಿಂತನ ವ್ಯಾಖ್ಯಾಸಹಿತ)

೧೫. ಮಹಾದೇವ ಲಿಂಗೇಂದ್ರ ವಿಜಯ

೧೬. ಶಿವಗಣ ಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ

೧೭. ಶಬ್ದಮಣಿದರ್ಪಣ

೧೮. ಶಿವದಾಸ ಗೀತಾಂಜಲಿ

೧೯. ಶೃಂಗಾರ ನಿದರ್ಶನ (ಚಿಕ್ಕದೇವರಾಜ ಸಪ್ತಪದ)

೨೦. ಸರಳ ಪಂಪಭಾರತ

೨೧. ಸರಳ ಶೂನ್ಯಸಂಪಾದನೆ

೨೨. ಸರ್ವಜ್ಞನ ವಚನಗಳು

೨೩. ಹರಿಹರನು ಕಂಡ ಜ್ಯೋತಿರ್ಲಿಂಗದ ಮೂರು ಮುಖಗಳು

**ಕಾವ್ಯ ಸಂಕಲನಗಳು**

೧. ಠಾಣಾಂತರ

೨. ಜಾಲಾರಿ

**ಅನುವಾದಿತ ಕೃತಿಗಳು**

೧. ಗೋಳೂರು ಸಿದ್ಧವೀರಣ್ಣನ ಶೂನ್ಯಸಂಪಾದನೆ (ಸರಳ ಗದ್ಯಾನುವಾದ)

೨. ನಾಟಕಾಮೃತ ಬಿಂದುಗಳು

೩. ನಿಜಗುಣ ಶಿವಯೋಗಿಗಳ ಚಾರಿತ್ರ್ಯ (ಗದ್ಯಾನುವಾದ - ಟಿಪ್ಪಣಿಸಹಿತ)

೪. ಭಾರತ ರೂಪಕ

೫. ಭಾಸನ ನಾಟಕಗಳ ಗದ್ಯಾನುವಾದ

೬. ಬುದ್ಧಚರಿತೆ

೭. ರಾಘವಾಂಕನ ಸಿದ್ಧರಾಮ ಚಾರಿತ್ರ್ಯ

೮. ರಾಮಾಯಣ ನಾಟಕ ತ್ರಿವೇಣಿ

೯. ಸೌಂದರ್ಯನಂದ

೧೦. ಹರಿಶ್ಚಂದ್ರ ಕಾವ್ಯಗ ಸರಳ ಗದ್ಯಾನುವಾದಗಳು

**ಸ್ವತಂತ್ರ್ಯ ಕೃತಿಗಳು**

೧. ಅಲ್ಲಮನು ಮೈ ಮೇಲೆ ಬಂದಾಗ

೨. ಕಲಬುರ್ಗಿಯ ಶಿವಶರಣ ಬಸವ

೩. ವಚನ ಚಿಂತನ

೪. ವೀರಶೈವ ಚಿಂತನ

೫. ವೀರಶೈವ ತತ್ವ ಮತ್ತು ಆಚರಣೆ

೬. ಶರಣಬಸವ ಸಂಪುಟ

ಹೀಗೆ ೪೦ಕ್ಕೂ ಹೆಚ್ಚು ಅಧಿಕವಾಗಿ ಕಂಡು ಬರುವ ಕೃತಿಗಳು ಶ್ರೀಯುತರ ಸಾಹಿತ್ಯ ಸಾಧನೆಯನ್ನು ಸಾಬೀತು ಮಾಡುತ್ತವೆ. ಕೇವಲ ಒಂದೇ ವಲಯಕ್ಕೆ ಸೀಮಿತವಾಗದೇ ಸಂಶೋಧನೆ ಗ್ರಂಥಸಂಪಾದನೆ, ಕಾವ್ಯಾನುಭಾವ, ಅನುವಾದ, ಸ್ವತಂತ್ರ್ಯ ಕೃತಿ ರಚನೆಯಂತಹ ವಿವಿಧ ವಲಯಗಳಲ್ಲಿ ಸಾಹಿತ್ಯ ಕೃಷಿಗೈದಿದ್ದಾರೆ. ಪ್ರತಿ ಕೃತಿಯ ಸಂಪಾದನೆಯಲ್ಲಿ ತಾವೊಬ್ಬ ಸಂಶೋಧಕರಾಗಿ ವಿವಿಧ ಆಕರಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಸ್ಪಷ್ಟವಾದ ನಂತರವೆ ಅದನ್ನು ಒಪ್ಪುವಂತಹ ನಿಷ್ಠುರವಾದಿ ಎಲ್. ಬಸವರಾಜು ಅವರು. ಪ್ರಾಚೀನ ಕಾವ್ಯ ಸಂಪಾದನೆಯಲ್ಲಿ ಹಿಂದೆ ಸಂಪಾದಿತ ಆವೃತ್ತಿಗಳ ಜೊತೆ ವಿವಿಧ ಓಲೆಗರಿಗಳ ಸಹಾಯ ಪಡೆದು ಸರಿ ಎನಿಸಿದ, ತೃಪ್ತಿಕರವಾಗಿ ತೋರಿಸಿ ಒಂದನ್ನು ಆಧಾರಪ್ರತಿಯನ್ನಾಗಿಟ್ಟುಕೊಂಡು ಅದರ ಪಾಠದೊಡನೆ ಇತರ ಪ್ರತಿಗಳ ಪಾಠಾಂತರಗಳ ಅಡಿಯಲ್ಲಿ ಕೊಟ್ಟಿದ್ದಾರೆ. ಈ ಸಂಪಾದನೆಯಲ್ಲಿ ಆಳವಾದ ವಿದ್ವತ್ ವ್ಯುತ್ಪತ್ತಿ, ಆಳವಾದ ಹಳಗನ್ನಡ ಭಾಷಾಜ್ಞಾನ ಮತ್ತು ಸಾಹಿತ್ಯ ಸಂಬಂಧಿ ಶಾಸ್ತ್ರ ವಿಷಯಗಳ ಅಧ್ಯಯನ ಎಷ್ಟೆಂಬುದು ತಿಳಿದುಬರುತ್ತದೆ. ಸಂಪಾದನೆಯ ನಿಯಮದಲ್ಲಿ ಹಿಂದಿನವರ ಮಾದರಿಯನ್ನು ತೊರೆದು ಆಧುನಿಕ ವಿಧಾನದಲ್ಲಿ ಸಂಪಾದನೆಮಾಡಿ ತೋರಿಸಿದ್ದಾರೆ.

ಎಲ್. ಬಸವರಾಜು ಅವರ ಸಂಪಾದನೆಯ ವೈಶಿಷ್ಟ್ಯವೆಂಬುತೆ ಮೂಲ ಕೃತಿಕಾರನ ಇತಿವೃತ್ತವನ್ನು ಪ್ರಸ್ತಾವನೆಯ ಸಂದರ್ಭದಲ್ಲಿ ದೀರ್ಘವಾಗಿ ಪ್ರಸ್ತಾಪಿಸಿ ಕಾವ್ಯದ ಅಥವಾ ಪದ್ಯಗಳ ವಿವರಣೆಯ ಜೊತೆಗೆ ಕಾವ್ಯ ವಿಮರ್ಶೆಯನ್ನು ಓದುಗರಿಗೆ ಅನುಕೂಲವಾಗುವಂತೆ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಶಿವದಾಸ ಗೀತಾಂಜಲಿಯಂತಹ ಕೃತಿ ಸಂಪಾದನೆಯಲ್ಲಿ ತಾವು ನೀಡುವ ದೀರ್ಘ ಪ್ರಸ್ತಾವನೆಯಲ್ಲಿ ವೀರಶೈವ ಸಾಹಿತ್ಯದ ಇತಿಹಾಸದ ಜೊತೆಗೆ ಕಾವ್ಯ ವಿಮರ್ಶೆಯನ್ನು ಓದುಗರಿಗೆ ಅನುಕೂಲವಾಗುವಂತೆ ಸ್ಪಷ್ಟವಾಗಿ ನಿರೂಪಿಸಿರುತ್ತಾರೆ. ಶಿವದಾಸ ಗೀತಾಂಜಲಿಯಂತಹ ಕೃತಿ ಸಂಪಾದನೆಯಲ್ಲಿ ತಾವು ನೀಡುವ ದೀರ್ಘ ಪ್ರಸ್ತಾವನೆಯಲ್ಲಿ ವೀರಶೈವ

ಸಾಹಿತ್ಯದ ಇತಿ ವೃತ್ತಾಂತದ ಜೊತೆಗೆ ಹಾಡುಗಳ ಹಿನ್ನೆಲೆಯನ್ನು ಸ್ಪಷ್ಟವಾಗಿ ವಿವರಿಸುತ್ತಾರೆ.

ಇದರಿಂದ ಶಿವದಾಸರ ಹಾಡುಗಳ ಬಗ್ಗೆ ಅಧ್ಯಯನ ಮಾಡುವವರಿಗೆ ಶಿವದಾಸರ ಹಾಡುಗಳ ಬಗೆಗಿನ ಹಿಡಿತ ಸಿಗುತ್ತದೆ. ಹೀಗೆ ಕೃತಿಯ ಆರಂಭದ ಪ್ರಸ್ತಾವನೆಯಲ್ಲಿ ಕವಿಯ ಕೃತಿಯಾಗಿದ್ದಲ್ಲಿ ಕೃತಿಕಾರನ ಇತಿವೃತ್ತ ವಿಚಾರ ಕೃತಿಯ ಆಕರಗಳು ಕೃತಿಕಾರನ ಮೇಲೆ ಬಿದ್ದಿರುವ ಪ್ರಭಾವ ಮುಂದಿನವರ ಮೇಲೆ. ಪಾಠಭಾಗದಲ್ಲಿ ಬಳಸಿದ ಚಿಹ್ನೆ ಸಂಕೇತಗಳು ಈ ಎಲ್ಲವು ಅಧ್ಯಾಯದಲ್ಲಿ ಪೂರ್ಣವಾಗಿ ವಿವೇಚಿಸುವಿಕೆಗೆ ಸಹಕಾರಿಯಾಗುತ್ತದೆ. ಅನುಬಂಧದ ಅಕಾರಾದಿಯಲ್ಲಿ ಅರ್ಥದ ಪದಕೋಶ ರಾಗ ತಾಳಗಳಿದ್ದರೆ ರಾಗ, ತಾಳಗಳ ಬಗ್ಗೆ ಅಕಾರಾದಿಯನ್ನು ಕೊನೆಗೆ ನೀಡುತ್ತಾರೆ. ಕಠಿಣ ಅರ್ಥಗಳಿಗೆ ವ್ಯಾಖ್ಯಾನವನ್ನು ನೀಡುವ ಪರಿಣಾಮ ಇವರ ಸಂಪಾದನೆಯಲ್ಲಿ ಕಂಡುಬರುತ್ತದೆ.

ಪಂಪನಂತಹ ಶ್ರೇಷ್ಠ ಮಾರ್ಗ ಕವಿಯನ್ನು ಸಾಮಾನ್ಯರಿಗೆ ತಿಳಿಸುವುದಕ್ಕಾಗಿ ಪಂಪಭಾರತ, ಆದಿಪುರಾಣಗಳನ್ನು ಸರಳಾನುವಾದ ಮಾಡುವುದರ ಜೊತೆಗೆ ಪದ್ಯಗಳನ್ನು ಒಡೆದು ಸಂದಿ ಬಿಡಿಸಿ ಅರ್ಥ ಸಮೇತ ಅಡಿಟಿಪ್ಪಣಿಯನ್ನು ಕೊಟ್ಟು, ಓದುಗರಿಗೆ ಉಪಯುಕ್ತವಾಗುವಂತೆ ಬಿಡಿಸಿ ಸರಳವಾಗಿ ಸಂಪಾದಿಸಿದ್ದಾರೆ. ಇಂತಹ ಸರಳಾನುವಾದದ ಕೃತಿಗಳು ಬಸವರಾಜು ಅವರ ವಿದ್ವತ್ ಪ್ರತಿಭೆಗೆ ಸಾಕ್ಷಿ ಎಂಬಂತೆ ನಿಂತಿವೆ.

'ಠಾಣಾಂತರ' ಮತ್ತು 'ಜಾಲಾರಿಯಂತ' ಕವನ ಸಂಕಲನಗಳು ತಾವೊಬ್ಬ ಗ್ರಂಥ ಸಂಪಾದಕ ಮಾತ್ರವಲ್ಲ. ಸೃಜನಾಶೀಲ ಬರಹಗಾರರೆಂಬುದನ್ನು ಸಾಬೀತು ಮಾಡಿವೆ. 'ಅಶ್ವಘೋಷನ ಸೌಂದರ್ಯನಂದ', 'ಬುದ್ಧ ಚರಿತೆ'ಯಂತಹ ಸಂಸ್ಕೃತ ಕೃತಿಗಳನ್ನು ಅನುವಾಲಿಸುವುದರ ಮೂಲಕ ತಮ್ಮ ಸಾಹಿತ್ಯ ಸಾಧನೆಯನ್ನು ಮತ್ತಷ್ಟು ವಿಸ್ತರಿಸಿದ್ದರೆನ್ನಬಹುದು.

ಎಲ್. ಬಸವರಾಜು ಅವರ ಇಡೀ ಬದುಕು ಮತ್ತು ಬರಹ ವಿಶಿಷ್ಟವಾದುದು. ಸಮರ್ಪಣಾ ಮನೋಭಾವದ ನಿರಂತರ ಅಧ್ಯಯನಶೀಲತೆ ಸತ್ಯಪರತೆ ನಿಷ್ಠೂರತೆಗಳಲ್ಲಿ ಅದು ವಿಕಾಸ ಪಡೆದಿದೆ. ಈ ಹಿನ್ನೆಲೆಯಲ್ಲಿ ಅವರ ಸಾಧನೆಯನ್ನು ಒಂದು ಅಚಲವಾದ ತಪಸ್ಸೆಂದೇ ಪರಿಭಾವಿಸಬಹುದು.

**ಸಕೊನೆ ಟಿಪ್ಪಣಿಗಳು**

೧. ಬಸವರಾಜು ಎಲ್., ಸರಳ ಪಂಪಭಾರತ ಮುಖಪುಟದಿಂದ

೨. ಅಂಗಡಿ ಎಸ್.ಎಸ್., ಎಲ್. ಬಸವರಾಜು ಬಗೆಗೆ ಸಂಬಂಧಿಸಿದ ಲೇಖನ, ಸಿರಿಸಂಪದ, ಸಂ. ಕೆ. ರವೀಂದ್ರನಾಥ, ಎಫ್.ಟಿ.ಹಳ್ಳಿಕೇರಿ, ಪು.

೩. ಬಸವರಾಜು ಎಲ್., ಅಲ್ಲಮನ ವಚನ ಚಂದ್ರಿಕೆಯ, ಪ್ರಸ್ತಾವನೆ ಭಾಗ

೪. ಬಸವರಾಜು ಎಲ್., ಕೇಶಿರಾಜನ ಶಬ್ದಮಣಿದರ್ಪಣ, ಪುಟ ೮

೫. ಬಸವರಾಜು ಎಲ್., ಠಾಣಾಂತರ, ಪ್ರಸ್ತಾವನೆ ಭಾಗ

೬. ಬಸವರಾಜು ಎಲ್., ತಮ್ಮ ಯ ಸ್ವ ವಿವರದ ಜೊತೆ ಕಳುಹಿಸಿದ ಲೇಖನದ ಭಾಗದಿಂದ ಆಯ್ದುಕೊಂಡದ್ದು.

## ಅಧ್ಯಾಯ ೩

## ಶಿವದಾಸರ ಹಾಡುಗಳು : ಉಗಮ-ವಿಕಾಸ

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ೧೨ನೇ ಶತಮಾನ ಒಂದು ಪ್ರಮುಖ ಘಟ್ಟ. ಕಾರಣ ಸಾಹಿತ್ಯವು ಮಾರ್ಗದಿಂದ ದೇಶಿಯೆಡೆಗೆ ಹೊರಳಿದ ಕಾಲ. ಪ್ರಭುತ್ವವನ್ನು, ಮಾರ್ಗಸಾಹಿತ್ಯವನ್ನು ಜನಸಾಮಾನ್ಯರು ಧಿಕ್ಕರಿಸಿ, ಜನಸಾಮಾನ್ಯರ ಸಾಹಿತ್ಯ ರಚಿತವಾದ ಕಾಲವದು. ಅದೊಂದು ಪರ್ವಕಾಲವೇ ಸರಿ. 'ವಚನ' ಸಾಹಿತ್ಯವನ್ನು ಶಿವಶರಣರು ತಮ್ಮ ಸಾಹಿತ್ಯ ಮಾಧ್ಯಮವನ್ನಾಗಿ ಮಾಡಿಕೊಂಡು ಸಾಮಾಜೋ-ಧಾರ್ಮಿಕ ಚಳುವಳಿಯನ್ನು ಕೈಗೊಂಡರು. ಶಿವಶರಣರು ರಚಿಸಿದ ವಚನ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ಪ್ರಭಾವಶಾಲೀ ಆತ್ಮ ವಿಮರ್ಶೆಯ ಮಾಧ್ಯಮವಾಗಿ ಸ್ವತಂತ್ರವಾಗಿ ಬೆಳೆದು ವಿಜೃಂಭಿಸಿ ಮುಂದಿನ ಸಾಹಿತ್ಯ ಪರಂಪರೆಗಳ ಮೇಲೆ ಪ್ರಭಾವ ಬೀರಿ ಕನ್ನಡ ಸಾಹಿತ್ಯದಲ್ಲಿ ಮಾತ್ರವಲ್ಲದೆ ವಿಶ್ವಸಾಹಿತ್ಯದಲ್ಲಿ ಒಂದು ಅವಿಭಾಜ್ಯ ಅಂಗವಾಗಿದೆ. ಸ್ವಂತಿಕೆಯಿಂದ ಮೆರೆದ ವಚನಸಾಹಿತ್ಯವನ್ನು ದೇವರ ದಾಸಿಮಯ್ಯ, ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ, ನುಲಿಯ ಚಂದಯ್ಯ, ಸೂಳೆ ಸಂಕವ್ವೆ, ಹಡಪದ ಅಪ್ಪಣ್ಣ, ಏಕಾಂತ ರಾಮಯ್ಯ, ಮಡಿವಾಳ ಮಾಚಯ್ಯ ಮುಂತಾದ ೧೧೫ಕ್ಕೂ ಹೆಚ್ಚು ವಚನಕಾರರು ವಿವಿಧ ಕಾಯಕಗಳನ್ನು ಒಳಗೊಂಡು ಕಾಯಕವೇ ಕೈಲಾಸ ಎಂಬ ತತ್ವದಡಿ ವಚನವನ್ನು ಬಳಸಿ, ತಮ್ಮ ಅನುಭವಗಳನ್ನು ಹೇಳಿಕೊಳ್ಳತೊಡಗಿದ್ದರಿಂದ ವಚನ ಸಾಹಿತ್ಯ ಒಂದು ಚಳುವಳಿಯೂ ಆಯಿತು.

ವಚನಕಾರರು ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ವಚನಗಳನ್ನು ಬರೆದು ಹಾಡಿದರು. ವಚನಕಾರರು ತಾವು ಕಟ್ಟ ಬಯಸಿದ್ದು ಹೊಸ ಸಮಾಜವೊಂದನ್ನು ಅದಕ್ಕಾಗಿ ಅವರು ತಮ್ಮ ಆಲೋಚನೆಗಳನ್ನು ಜನಗಳಲ್ಲಿ ಭಿತ್ತಿ ವ್ಯಾಪಕವಾಗಿ ಅವು ಬೆಳೆಯಲು ಹಾತೊರೆಯುತ್ತಿದ್ದರು. ಶರಣರು ಜನರಿಗೆ ಅರ್ಥವಾಗುವ ಭಾಷೆ, ಶೈಲಿಗಳಲ್ಲಿ ಹೇಳಿದ ಮಾತುಗಳೇ ಅಥವಾ ಬರೆದಿಟ್ಟವೇ ವಚನಗಳೆನಿಕೊಂಡವು. ತಾವು ಕವಿಗಳೆಂಬ ಭಾವನೆಯಾಗಲೀ ತಮ್ಮ ರಚನೆಗಳು ಸಹೃದಯರಿಗೆ ರಸಾನಂದವನ್ನುಂಟುಮಾಡಬೇಕೆಂಬ ಉದ್ದೇಶವಾಗಲಿ ಅವರಾರಿಗೂ ಇರಲಿಲ್ಲ. ಅವರು ಕಟ್ಟಬಯಸಿದ್ದು ಹೊಸ ಸಮಾಜವೊಂದನ್ನು ಹಳೆಯ ವ್ಯವಸ್ಥೆಯ ಅನಪೇಕ್ಷಣೀಯ ಅಂಶಗಳನ್ನು ಕಿತ್ತುಹಾಕಿ, ಹೊಸ ಜನಪರವಾದ ನಿಲುವುಗಳನ್ನೊಳಗೊಂಡ ಒಂದು ಸಾಮಾಜಿಕ ಸ್ಥಿತಿಯೊಂದನ್ನು. ಅಂತಹ ತಮ್ಮ ಕನಸಿನ ಬಗೆಗಿನ ತಮ್ಮ ವಿಚಾರಗಳನ್ನು, ಆಶೋತ್ತರಗಳನ್ನು ಇಹ-ಪರಗಳಿಗೆ ಸಂಬಂಧಿಸಿದ ಆಲೋಚನೆಗಳನ್ನು ಸಮಕಾಲೀನ ಪರಿಸ್ಥಿತಿಯ ಕುರಿತ ಪ್ರತಿಭಟನೆಯನ್ನು ಸಹಜವಾಗಿ ವ್ಯಕ್ತಪಡಿಸಿದಾಗ, ಅವು ವಿಚಾರಶೀಲರಾದ ವ್ಯಕ್ತಿಗಳ ದಿಟ್ಟ ಅನುಭವ ಸಹಜ ಅಭಿವ್ಯಕ್ತಿಗಳಾದ್ದರಿಂದ-ಮನತುಂಬುವ ರಚನೆಗಳಾದವು ಅವೇ ವಚನಗಳು.

ವಚನಕಾರರು ಅಂದಿನವರೆಗಿನ ಜಡ್ಡುಗಟ್ಟಿದ ಸಮಾಜವನ್ನು ತೊಡೆದುಹಾಕಿ ಎಲ್ಲರೂ ಸಮಾನರು. ಎಲ್ಲರಿಗೂ ಅಭಿವ್ಯಕ್ತಿಸುವ ಸ್ವಾತಂತ್ರ್ಯವಿದೆ. ತಮಗೆ ಇಷ್ಟವಾದ ಧರ್ಮವನ್ನು ಸ್ವೀಕರಿಸುವ ಅಭಿಮತ ಇಂತಹ ಸ್ವಚ್ಛಂದದ ಸಮಾಜ ನಿರ್ಮಾಣ ಅದಕ್ಕಾಗಿ ಅವರು ಸರ್ವಧರ್ಮ ಸಮನ್ವಯದ ವೀರಶೈವ ಧರ್ಮವನ್ನು ಸ್ಥಾಪಿಸಿ. ಅದರ ಮೂಲಕ ಜಡ್ಡುಗಟ್ಟಿದ ಸಮಾಜವನ್ನು ತೊಡೆದು ಹೊಸ ಸಮಾಜದ ರಚನೆ. ಇದಕ್ಕೆ ಅಭಿವ್ಯಕ್ತ ಮಾಧ್ಯಮವಾಗಿ 'ವಚನ'ಗಳ ರಚನೆ. ವಚನಗಳ ಮೂಲಕ ವೀರಶೈವ ಧರ್ಮದ ಪ್ರಚಾರ ಪ್ರಸಾರ ಅದರ ಮೂಲಕ ನೂತನ ಸಮಾಜ ಕಟ್ಟುವಿಕೆಯೂ ವಚನಕಾರರ ಆಶಯವಾಗಿತ್ತು. ಹೀಗೆ ವಚನಗಳ ಮೂಲಕ ಕ್ರಾಂತಿಯನ್ನೇ ಉಂಟುಮಾಡಿದ ಶಿವಶರಣರು ತಮ್ಮ ಕಾಲಕ್ಕೆ ಅಥವಾ ತತ್ಪೂರ್ವ ಕನ್ನಡದಲ್ಲಿದ್ದ. ಆದರೆ ವಿಷಯಾಂತರವಾಗಿದ್ದ ಹಾಡುಗಳನ್ನು ಬರೆಯಲು ಮೊದಲಿಗರಾದರು.

ವಚನಗಳು ಹೆಸರೇ ಸೂಚಿಸುವಂತೆ 'ಮಾತು' ವಾಚಿಸುವುದಕ್ಕೆ ಬರುವಂತಹದು ಅಂದರೆ ಅನುಭವದ ವಾಚನ ಪಾತಳಿಗಾಗಿ 'ವಚನ'ಗಳನ್ನು ಬರೆದ ಶರಣರು, ಶ್ರವಣ ಪಾತಳಿಗಾಗಿ ಹಾಡುಗಳು/ಗೀತೆಗಳನ್ನು ರಚಿಸಿದರೆನ್ನಬಹುದು. ಒಂದಾರ್ಥದಲ್ಲಿ ವಾಚನ ಪಾತಳಿಗಿಂತ ಅಭಿವ್ಯಕ್ತಿ ಮಾಧ್ಯಮಕ್ಕೆ ಶ್ರವಣ ಪಾತಳಿಗಳಾದ ಹಾಡುಗಳು ಹೆಚ್ಚು ಸೂಕ್ತವೆಂಬುದನ್ನು ಮನಗಂಡಿದ್ದ ವಚನಕಾರರು ವಚನಗಳ ಜೊತೆ-ಜೊತೆಯಲ್ಲಿ ಹಾಡುಗಳ ರಚನೆಯನ್ನು ಕೈಗೊಂಡಿರಬಹುದು. ೧೫-೧೬ನೇ ಶತಮಾನಗಳಲ್ಲಿ ಯಾವ ಹರಿದಾಸರು ಕೀರ್ತನ ಸಾಹಿತ್ಯ ಪ್ರಕಾರದಿಂದ ಇಡೀ ದಕ್ಷಿಣ ಭಾರತದ ಸಂಗೀತ ಮತ್ತು ಸಾಹಿತ್ಯ ಪ್ರಪಂಚಗಳೆರಡರಲ್ಲೂ ಅದ್ವಿತೀಯ ಕೀರ್ತಿ ಗಳಿಸಿದರೋ, ಆ ಕೀರ್ತನ ಪ್ರಕಾರಕ್ಕೆ ೧೨ನೇ ಶತಮಾನದ ಬಸವಾದಿ ಶಿವಶರಣರ ಸ್ವರವಚನ ಸಾಹಿತ್ಯದ ಪರಿಚಯ ಇದ್ದ ಕಾರಣ, ಗದ್ಯಕ್ಕಿಂತ ಪದ್ಯಪ್ರಕಾರವೂ ಸಂವಹನ ದೃಷ್ಟಿಯಿಂದ ಅತ್ಯಂತ ಪರಿಣಾಮಕಾರಿ ಮಾಧ್ಯಮವೆಂದು ದಾಸರು ತಿಳಿದಿರಬೇಕು. ಅಂತೆಯೇ ಸಾಹಿತ್ಯ ಹಾಗೂ ಸಂಗೀತವನ್ನು ಸಂಯೋಜಿಸಿಕೊಂಡು ಸಾಹಿತ್ಯ ರಚನೆಗೆ ಮುಂದಾದರು.

ಹಾಡು ಅಥವಾ ಗೀತ ಎಂಬ ಸಾಹಿತ್ಯ ಪ್ರಕಾರ ಅತೀ ಪ್ರಾಚೀನವಾಗಿದ್ದು, ಸಾಹಿತ್ಯ ಗ್ರಂಥಸ್ಥ ಸ್ವರೂಪ ಪಡೆಯುವ ಪೂರ್ವದಲ್ಲಿ ಜನಪದರ ಹುಟ್ಟಿನಿಂದಲೇ ಕಂಠಸ್ಥವಾಗಿ ಬೆಳೆದುಬಂದಿತು. ಪ್ರಾಚೀನ ಕಾವ್ಯಗಳಲ್ಲಿ ಬಳಕೆಯಾಗುವ ಒನಕೆವಾಡು, ಪಾಡುಗವಿತೆ, ಬೀದಿಪಾಡು, ಪಾಡು, ಪಾಡುಗಬ್ಬಗಳ ಸಾಹಿತ್ಯ ಈ ಪ್ರಕಾರದ ಇತಿಹಾಸವನ್ನು ತಿಳಿಸುತ್ತದೆಯಾದರೂ ಇದರ ಪ್ರತ್ಯಕ್ಷ ದರ್ಶನವಾಗುವುದು ೧೨ನೇ ಶತಮಾನದಲ್ಲಿಯೇ. "ಶರಣರು ಗೈದ ಕ್ರಾಂತಿಗಳಲ್ಲಿ ಈ ಸಾಹಿತ್ಯ ಕ್ರಾಂತಿಯೂ ಒಂದಾಗಿದ್ದು. ಇದರಿಂದಾಗಿ ಸಾಹಿತ್ಯ ವಸ್ತು, ರೂಪ, ಭಾಷೆ, ಭಾವ ಎಲ್ಲದರಲ್ಲೂ ಹೊಸ ಬಗೆ ಬೀರಿತು. ಇದರಿಂದಾಗಿ ಎಲ್ಲವೂ ಹೊಸ ತಿರುವು ಪಡೆದವು." ಕೆಲ ಹಿಂದೆ ಇದ್ದ ಸಾಹಿತ್ಯ ಪ್ರಕಾರಗಳು ಮರು ಜೀವ ಪಡೆದುಕೊಂಡವು ಮತ್ತು ನವನ್ಮೋೀಶಾಲಿನಿಯಂತೆ ಕಂಗೊಳಿಸಿದವು, ಅಂತಹ ಪ್ರಕಾರಗಳಲ್ಲಿ, ಈ ಹಿಂದೆ ಜನಪದ ಸಾಹಿತ್ಯದಲ್ಲಿನ ಗೀತ ಪ್ರಕಾರವೂ ಒಂದು.

"ಪ್ರಾರಂಭದಲ್ಲಿ ಹಗುರವಾದ ಶೃಂಗಾರ, ಅತಿಯಾದ ಸಾಮಾನ್ಯ ಅಶ್ಲೀಲ ಭಾವಗಳನ್ನು ಪ್ರಕಟಿಸಲು ತನ್ನನ್ನು ಒಡ್ಡಿಕೊಂಡ ಹಾಡಿನ ಪ್ರಕಾರವನ್ನು ಶರಣರು ತಮ್ಮ ಶಿವಾನುಭವ, ಶಿವತತ್ತ್ವ, ಶಿವಸ್ತುತಿಗಳಿಗೆ ಮಾಧ್ಯಮ

ಮಾಡಿಕೊಂಡು ಅದಕ್ಕೊಂದು ಮಹತ್ವದ ಗಂಭೀರತೆಯನ್ನು ತಂದುಕೊಟ್ಟು ಎಲ್ಲರ ಗಮನ ಸೆಳೆಯುವಂತೆ ಮಾಡಿದರು."

"ಶಿವಶರಣರು ರಚಿಸಿದ ಹಾಡುಗಳು ದಾಸರಾದಿಯಾಗಿ ಪೂರ್ವದಲ್ಲಿ ಶರಣರಿಂದಲೇ ಕಂಡುಬರುತ್ತವೆನ್ನಬಹುದು. ಸಾಹಿತ್ಯ-ಸಂಗೀತ ಲೋಕದಲ್ಲಿ ಇಂದಿಗೂ ಅಮರವಾಗಿರುವ ದಾಸರ ಗೀತೆಗಳಿಗೆ ಶಿವಶರಣರ ಹಾಡುಗಳೇ ಮೂಲವಾಗಿವೆ. ದಾಸರ ಹಾಡುಗಳಂತೇ ಲಯ, ತಾಳ, ಪಲ್ಲವಿ ಎಲ್ಲವೂ ಶಿವಶರಣರ ಹಾಡುಗಳಲ್ಲಿಯೂ ಕಂಡುಬರುವುದರಿಂದ ಹಾಡಿನ ಉಗಮವು ಶಿವಶರಣ ಆದಿಯಾಗಿ ರಚಿತವಾಗಿದೆಯೆನ್ನಬಹುದು."

ಡಾ.ಎಲ್.ಬಸವರಾಜು ಅವರು ಇದೇ ವಾದವನ್ನು ಮಂಡಿಸುತ್ತಾ ಹಾಡುಗಳನ್ನು ರಚಿಸಿದ ಶಿವಶರಣರನ್ನು 'ಶಿವದಾಸ'ರೆಂದು ಕರೆಯುತ್ತಾರೆ. ಒಂದರ್ಥದಲ್ಲಿ ಈ ಹೇಳಿಕೆಯೂ ಸಮಂಜಸವೇ. ಏಕೆಂದರೆ ಹರಿದಾಸರು ಮುಖ್ಯವಾಗಿ ಸ್ತುತಿಸುವುದು, ಕೊಂಡಾಡುವುದು ಹರಿಯನ್ನು. ಅದರಂತೆ ಶಿವಶರಣರು ಶಿವನನ್ನು ಪೂಜಿಸಿ, ಅವನ ಲೀಲೆ, ಚಮತ್ಕಾರಗಳನ್ನು ಕೊಂಡಾಡಿ ಸ್ತುತಿಸುತ್ತಿದ್ದರು. 'ದಾಸ ಎಂದರೆ ಆಳು: ತೊತ್ತು', 'ದಾಸಯ್ಯ' ಎಂದರೆ ದೇವರ ಹೆಸರಿನಲ್ಲಿ ಅವನ ಕೊಂಡಾಡುತ್ತಾ ಊರಿಂದ ಊರಿಗೆ ಹೋಗುವವನು. ಹೀಗೆ ಶಿವನನ್ನು ರಾಗ, ತಾಳ, ಪಲ್ಲವಿಗಳ ಮುಖಾಂತರ ಸ್ತುತಿಸುತ್ತಿದ್ದರೆಂದು ಅವರ ವಚನ ಮತ್ತು ಹಾಡುಗಳ ಮುಖಾಂತರ ತಿಳಿದು ಬರುತ್ತದೆ. ಹರಿಯನ್ನು ಹಾಡಿ ಹೊಗಳುವುದರ ಮೂಲಕ ಹೇಗೆ ಹರಿದಾಸರೆನಿಸಿಕೊಂಡರೋ ಹಾಗೆಯೇ ಶಿವನನ್ನು ಸ್ತುತಿಸುವ ಶಿವಶರಣರನ್ನು ಶಿವದಾಸರೆಂದು ಕರೆಯುತ್ತಾರೆ. ಹೀಗೆ ಬಸವರಾಜು ಅವರ ಕರೆಯುವಿಕೆಯೂ ಸಮರ್ಪಕವಾಗಿದೆಯೆಂದೇ ಹೇಳಬಹುದು. ಶಿವಶರಣರೇ ಹಾಡುಗಳನ್ನು ರಚಿಸಿದರು. ಹರಿದಾಸಗಿಂತ ಪೂರ್ವದಲ್ಲಿ ಹಾಡುಗಳ ಉಗಮವು ಶರಣರಿಂದ ಆಗಿದೆ ಎಂಬುದೆನ್ನುವುದನ್ನು ಹಾಡುಗಳ ಉಗಮ-ವಿಕಾಸವನ್ನು ನೋಡುವುದರ ಮೂಲಕ ತಿಳಿಯಬಹುದಾಗಿದೆ.

**ಉಗಮ-ವಿಕಾಸ**

'ವಚನ' ಎಂಬ ಪದವು ಪ್ರಾಚೀನ ಚಂಪೂ ಕಾವ್ಯಗಳಲ್ಲಿ ಬಳಕೆಗೊಳ್ಳುತ್ತವೆ. ಕಾವ್ಯದ ಕಥೆ ಹೇಳಲು ಅಲ್ಲಲ್ಲಿ ಮಧ್ಯೆ ಮಧ್ಯೆ ವಚನಗಳನ್ನು ಬಳಸುತ್ತಿದ್ದರು. ಅಲ್ಲಿ 'ವಚನ'ವೆಂದರೆ ಗದ್ಯವೆನ್ನುವ ಅರ್ಥದಲ್ಲಿ ಬಳಕೆಯಾಗುತ್ತದೆ. ಆದರೆ ವಚನಕಾರರ ಪ್ರಕಾರ ವಚನವೆಂದರೆ ಗದ್ಯವಾದರೂ ಅದೊಂದು ಲಯಬದ್ಧವಾದ ಗದ್ಯವಾಗಿರುತ್ತದೆ. ಅತ್ತ ಪದ್ಯವೂ ಅಲ್ಲದ ಗದ್ಯವೂ ಅಲ್ಲದ ಸಾಹಿತ್ಯ ಪ್ರಕಾರ. ಈ ವಚನಗಳು ಶಿವಾನುಭವಿಗಳ ಅಂತರಂಗದ ರತ್ನಗಳು. ಹಾಗೆಯೇ ಕಾಯಕ ದಾಸೋಹ ಸಿದ್ಧಾಂತಗಳ, ಶರಣ ಸಂಸ್ಕೃತಿಯ ಪಡಿಯಚ್ಚುಗಳು.

ವಚನಗಳನ್ನು ರಚಿಸಿದ ಶಿವಶರಣರಲ್ಲಿ ಜನ ಬದುಕು ಹಸನಾಗಬೇಕೆಂಬ ಅಭಿಲಾಷೆ ಇತ್ತು. ಅದಕ್ಕಾಗಿ ಅವರು ಸತ್ಯಸಂಗಿಗಳಾಗಲು ಬಯಸಿದರು. ಎಲ್ಲರೊಳಗೊಂದಾಗಿ ಬಾಳಿದರು. ವೈಯಕ್ತಿಕ ಬೆಳವಣಿಗೆಯ ಜೊತೆ ಜೊತೆಗೆ ಸಮಷ್ಟಿ ಪ್ರಜ್ಞೆಯನ್ನು ಸಾಧಿಸಿ ಸಾಮಾಜಿಕ ಅಭಿವೃದ್ಧಿಗೂ ಕಾರಣಕರ್ತರಾದರು. ನೈತಿಕ ತಳಹದಿಯ ಮೇಲೆ ನಡೆಯಬೇಕೆಂದು ಸದ್ಗುರುವಿನ ಮೊರೆಹೊಕ್ಕರು. ಅಂಗದ ಮೇಲೆ ಲಿಂಗವ ಧರಿಸಿದರು. ಷಟ್‌ಸ್ಥಲ ಮಾರ್ಗವಲಂಬಿಗಳಾಗಿ ಗುರು ಹೇಳಿಕೊಟ್ಟ ಮಾರ್ಗದಲ್ಲಿ ತಮ್ಮ ಸಾಧನೆಯನ್ನು ಗೈದರು. ಕಾಯಕ

ಕಷ್ಟಾಯುವೆಂದರು ಅದಕ್ಕೆ ದಾಸೋಹಪೂರಕವೆಂದರು. ಸತ್ಯವೂ ಶುದ್ಧವೂ ಆದ ಕಾಯಕದೊಂದಿಗೆ ಸಮರ್ಪಣ ಭಾವನೆಯಿಂದ ದಾಸೋಹ ನಡೆಸಿದರು. 'ದಯವೇ ಧರ್ಮದ ಮೂಲ'ವೆಂದು ತಮಗಾದ ಅನುಭವವನ್ನು ಸುಂದರವಾಗಿ ಹಾಡಲು ಮತ್ತು ಬರೆಯಲು ಅನವರತರಾದರು.

"ಮರ್ತ್ಯದ ಮನದ ಮೈಲಿಗೆಯನ್ನು ಕಳೆಯಲೆಂದು
ಗೀತಮಾತೆಂಬ ಜ್ಯೋತಿಯ ಬೆಳಗಿಕೊಟ್ಟರು
ಕೂಡಲಚೆನ್ನಸಂಗನ ಶರಣರು"[೪]

ಹೀಗೆ ಈ ವಚನದಲ್ಲಿ ವಚನಗಳನ್ನು ಹಾಗೂ ಸ್ವರವಚನಗಳನ್ನು ಗೀತೆ ಎಂದು ಕರೆದಿದ್ದಾರೆ. ಅಲ್ಲದೆ ಈ ವಚನದಿಂದ ತಿಳಿದು ಬರುವುದೇನೆಂದರೆ, ವಚನಗಳ ಜೊತೆಗೇ ಸ್ವರವಚನ ಅಥವಾ ಹಾಡುಗಳನ್ನು ರಚಿಸಿದ್ದಾರೆಂಬುದು ತಿಳಿದುಬರುತ್ತದೆ.

ಶರಣರ ಹಾಡುಗಳು ರಾಗ, ತಾಳಗಳಿಗಂಟಿಕೊಂಡು ಬಂದಿರುವ ಸುಂದರ ಸ್ವರಗೀತೆಗಳಾಗಿವೆ. ಹರಿಹರನು ತನ್ನ ರಗಳೆಗಳಲ್ಲಿಯೂ ಅನೇಕ ಕಡೆ 'ಗೀತೆ' ಎಂಬ ಪದ ಬಳಸಿರುವುದನ್ನು ಕಾಣಬಹುದಾಗಿದೆ.

"ಆಗಳಾಗಳಿನ ಶಿವಾನುಭವಕ್ಕೆ ನವಗೀತಮಂ ಪಾಡಿ
ಗೀತಮಂ ಪಾಡುತಂ ಪೊರಮಟ್ಟು ನಡೆತಂದು
ಅಂದಂದಿನುಚಿತಕ್ಕೆ ಗೀತಮಂ ಪಾಡುತಂ"[೫] (ಬ.ದೇ.ರ.)

ಇದರಂತೆ ಸ್ವತಃ ಶಿವಶರಣರೇ ವಚನಗಳನ್ನು ಹಾಡುತ್ತಿದ್ದರೆಂಬುದಕ್ಕೆ ಅವರ ವಚನಗಳು ನಿದರ್ಶನಗಳನ್ನು ಒದಗಿಸುತ್ತವೆ.

"ತಾಳಮಾನ ಸರಿಸವನರಿಯೆ
ಓಜೆ ಬಜಾವಣೆಯ ಲೆಕ್ಕವನರಿಯೆ
ಅಮೃತಗಣ ದೇವಗಣವನರಿಯೆ
ಕೂಡಲ ಸಂಗಮದೇವಾ ಎನಗೆ ಕೇಡಿಲ್ಲವಾಗಿ
ಆನು ಒಲಿದಂತೆ ಹಾಡುವೆ"[೬] (ಶೀ.ಗೀ.ಪು.೯೭)

ಇದರಿಂದ ವಚನಕಾರರು ಸಂಗೀತವನ್ನು ಬಲ್ಲವರಾಗಿದ್ದರೆಂಬುದನ್ನು ತಿಳಿಯಬಹುದಾಗಿದೆ. ಹಾಗೆಯೇ ಸಂಗೀತ ಬರುತ್ತದೆ ಎಂದು ಅಹಂನಿಂದ ಮೆರೆದವರಲ್ಲ, ಹಾಡುತ್ತ ಹಾಡುತ್ತ ನಾಲಿಗೆ ದಣಿಯದು ಎಂದೂ ಹಾಡಿದವರು

"ಆಡಿ ಕಾಲು ದಣಿಯವು. ನೋಡಿ ಕಣ್ಣು ದಣಿಯವು
ಹಾಡಿ ನಾಲಗೆ ದಣಿಯದು. ಇನ್ನೇವೆನಿನ್ನೇವೆ

ನಾ ನಿಮ್ಮ ಕೈಯಾರೆ ಪೂಜಿಸಿ ಮನದಣಿಯ
ಲೊಲ್ಲದಿನ್ನೇವೆನಿನ್ನೇವೆ? ಕೂಡಲಸಂಗಮದೇವಾ
ಕೇಳಯ್ಯಾ! ನಿಮ್ಮ ಉದರವ ಬಗಿದಾನು
ಹೋಗುವ ಭರವೆನಗೆ"[೬] (ಬ.ದ.ಸಂ. ಪು.೪೯೪)

ಹೀಗೆ ಹಾಡಿದವರು. ಅಲ್ಲಮಪ್ರಭು ಕೂಡ 'ಎರಡೆಂಭತ್ತು ಕೋಟಿ ವಚನವಾಡಿ' ಎಂದು ಹಾಡಿರುವ ವಚನವನ್ನು ಸಹ ನೋಡಬಹುದು. ಅದೇ ರೀತಿ ಶಿವಯೋಗಿ ಸಿದ್ಧರಾಮ ಅರವತ್ತೆಂಟು ಸಾವಿರ ವಚನಗಳನ್ನು ಹಾಡಿ ಹಾಡಿ ಸೋತಿತೆನ್ನ ಮನವು ಎಂದು ಹಾಡಿದ್ದಾರೆ.

"ಅರವತ್ತೆಂಟು ಸಾವಿರ ವಚನಗಳ ಹಾಡಿ ಹಾಡಿ
ಸೋತಿ ತೆನ್ನ ಮನ ನೋಡಯ್ಯ
ಹಾಡುವುದೊಂದೆ ವಚನ, ನೋಡುವುದೊಂದೆ ವಚನ
ವಿಷಯ ಬಿಟ್ಟು ನಿರ್ವಿಷಯನಾಗುವುದೊಂದೇ ವಚನ
ಕಪಿಲಸಿದ್ದ ಮಲ್ಲೇಶನಲ್ಲಿ"[೮] (ಸಿ.ರಾ.ವ.ಸ. ವಚನ-೧೦೬)

ಹಾಗೆಯೇ ಬಸವಣ್ಣನ ಒಂದು ವಚನದಲ್ಲಿ ಬತ್ತೀಸ ರಾಗದ ಪ್ರಸ್ತಾಪವು ಕಂಡುಬರುತ್ತದೆ.

"ಎನ್ನ ಕಾಯವ ದಂಡಿಗೆಯ ಮಾಡಯ್ಯ
ಎನ್ನ ಶಿರವ ಸೋರೆಯ ಮಾಡಯ್ಯ
ಎನ್ನ ನರವ ತಂತಿಯ ಮಾಡಯ್ಯ
ಎನ್ನ ನೆರಳ ಕಡ್ಡಿಯ ಮಾಡಯ್ಯ
ಬತ್ತೀಸ ರಾಗವ ಪಾಡಯ್ಯ ಉರದಲೊತ್ತಿ
ಬಾರಿಸು ಕೂಡಲಸಂಗಮದೇವಾ"[೯] (ಬ.ಷ.ವ. ೫೦೦)

ಹೀಗೆ ಅನೇಕ ವಚನಕಾರರು ವಚನಗಳನ್ನು ಹಾಡಿದೆ ಎಂದು ಉಲ್ಲೇಖಿಸುತ್ತಾರೆ. ಆದರೂ ವಚನಗಳನ್ನು ಹಾಡುಗಳೆಂದು ಪರಿಗಣಿಸಲಾಗುವುದಿಲ್ಲ ಅವೇನಿದ್ದರೂ ಭಾವಪೂರ್ಣವಾದ ವಚನದಲ್ಲಿ ಹೆಚ್ಚು ಅರ್ಥವ್ಯಾಪಕತೆಯನ್ನು ಕಂಡುಕೊಳ್ಳುವಂತಹದ್ದು "ವಚನವೆಂದರೆ 'ವಾಚ್' ಹೇಳು, ನುಡಿ ಹುಸಿಹೋಗದ ಮಾತು ಎನ್ನುವ ಅರ್ಥದಲ್ಲಿ ಬಳಸಲಾಗುತ್ತದೆ. ಈ ವಚನಗಳು ಹಾಗೂ ಸ್ವರವಚನಗಳಲ್ಲಿ ಕ್ರಿಯಾಜ್ಞಾನಗಳ ಸಮನ್ವಯವನ್ನು ಕಾಣುತ್ತೇವೆ. ಇವು ಶರಣರ ಆತ್ಮಗೀತೆಗಳಂತೆ ಕಂಡುಬರುತ್ತವೆ. ಆದರೆ ಸ್ವರವಚನಗಳಿಗೆ ರಾಗ-ತಾಳಗಳ ನಿರ್ದೇಶನವು ಇರುವುದರಿಂದ ಶಾಸ್ತ್ರೀಯವಾಗಿ ಹಾಡುತ್ತಾ ಬಂದಿರುವರು. ಆದ್ದರಿಂದ ಹರಿದಾಸರಿಗಿಂತ ಪೂರ್ವದಲ್ಲಿ ಅಂದರೆ ಶರಣರಲ್ಲಿ ಅಥವಾ ಅದಕ್ಕಿಂತಲೂ ಪೂರ್ವದಲ್ಲಿ ಅದರ ಒಳಹುಗಳು ಇರುವುದು ಗೋಚರಿಸುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ 'ಕವಿರಾಜಮಾರ್ಗ'ದ ಪೂರ್ವದಲ್ಲಿ ಕನ್ನಡ ದೇಸಿ ಕಾವ್ಯ ಪ್ರಕಾರಗಳಿದ್ದವು ಎಂಬುದು ತಿಳಿದುಬರುತ್ತದೆ. ವಿಮಲೋದಯ, ನಾಗಾರ್ಜುನ ಮೊದಲಾದ ಕವಿಗಳೂ ಇದ್ದುದು ಕಂಡುಬರುತ್ತದೆ. ಚತ್ತಾಣ ಬೆದಂಡೆ, ಒನಕೆವಾಡು, ಧವಳಹಾಡು, ಬೀರನ ಕಥೆ ಮೊದಲಾದವುಗಳಲ್ಲಿ ಕೃತಿ ರಚಿತವಾಗಿರುವುದು ಕಂಡುಬರುತ್ತದೆ. ನಮಗೆ ಉಪಲಬ್ಧವಾದ ಪ್ರಾಚೀನ ಕಾವ್ಯವಾದ 'ಕವಿರಾಜಮಾರ್ಗ'ದಲ್ಲಿ ಹೇಳಿರುವ ಚತ್ತಾಣ-ಬೆದಂಡೆಗಳು ಪಂಪಪೂರ್ವಯುಗದಲ್ಲಿ ಹಾಡುಗಬ್ಬಗಳಾಗಿರಬಹುದು. ಎಂ.ಎಂ.ಕಲಬುರ್ಗಿಯವರು ತಮ್ಮ ಮಹಾಪ್ರಬಂಧವಾದ "ಕವಿರಾಜಮಾರ್ಗದ ಕನ್ನಡ ಸಾಹಿತ್ಯ ಪರಿಸರ"ದಲ್ಲಿ ಚತ್ತಾಣಂ-ಬೆದಂಡೆಗಬ್ಬಂ ಇವು ಪ್ರಾಚೀನ ಪದ್ಯ ಕಾವ್ಯ ಪ್ರಬೇಧದ ಎರಡು ಹೆಸರು (ಗದ್ಯಕಥೆ), ಕವಿರಾಜ ಮಾರ್ಗಕಾರ ಚತ್ತಾಣ-ಬೆದಂಡೆಗಳನ್ನು ಹೀಗೆ ವಿವೇಚಿಸುತ್ತಾನೆ.

"ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚಿತ್ತಾಣಮುಂ ಬೆದಂಡೆಯು ಮೆಂದೀ
ಗಡಿನ ನೆಗಳ್ತೆಯ ಕಬ್ಬದೊಳೊಡಂಬಡಂ ಮೂಡಿದರ್ ಪುರಾತನ ಕವಿಗಳ್||
ಪರಮ. ಶ್ರೀ ವಿಜಯ ಕವೀಶ್ವರ ಪಂಡಿತ ಚಂದ್ರ ಲೋಕಪಾಲಾದಿಗಳಾ
ನಿರತಿಶಯ ವಸ್ತುವಿಸ್ತಾರ| ವಿರಚನೆ ಲಕ್ಷ್ಯಂ ತದಾದ್ಯ ಕಾವ್ಯಕ್ಕೆಂದುಂ"[೨೦]

ಈ ಪದ್ಯವನ್ನು ಲಕ್ಷಿಸಿದ ತೀ.ನಂ.ಶ್ರೀಯವರು "ನುಡಿಗೆಲ್ಲಂ ಸಲ್ಲಿದ' ಅಂದರೆ ಬೇರೆ ಭಾಷೆಯಲ್ಲಿ ಇಲ್ಲದ ಕನ್ನಡದ್ದೇ ಆದ ಕಾವ್ಯ ಪ್ರಕಾರವೆಂದ್ಹೇಳುವ ಹಾಗೆ ತೋರುತ್ತದೆನ್ನುತ್ತಾರೆ. ಎಲ್ಲಾ ಕಾಲದಲ್ಲಿಯೂ ಸಮಸ್ತ ಪ್ರಜೆಗಳಿಗೆ ಗ್ರಾಹ್ಯವಾಗುವ ಗ್ರಂಥಸ್ಥ ಭಾಷೆಯೊಂದಿರುತ್ತದೆ. ಇದು ನುಡಿಗೆಲ್ಲಂ ಸಲ್ಲುವ ಭಾಷೆ, ಜೊತೆಗೆ ಸಾಮಾನ್ಯರ ಮಟ್ಟದಲ್ಲಿ ತಂತಮ್ಮ ಪ್ರಾಂತ್ಯಗಳಿಗೆ ವಿಶಿಷ್ಟವಾದ ಆಡುಭಾಷೆಯೊಂದು ಇರುತ್ತದೆ.

ಇದು ನುಡಿಗೆಲ್ಲಂ ಸಲ್ಲದ ಭಾಷೆ. ಹೀಗೆ ಕವಿರಾಜಮಾರ್ಗಕಾರನ ಕಾಲಕ್ಕೆ ಹಿಂದೆಯೇ ಆಡುಮಾತಿನಲ್ಲಿ 'ಬೀದಿವರೆಯ ಬೀರನಕಥೆ'ಯಂತಹ ಜಾನಪದ ಕಲೆಗಳು ರಚನೆಗೊಳ್ಳುತ್ತಿರಬೇಕು. ಮೊದಮೊದಲು ಚಿತ್ತಾಣಂ-ಬೆದಂಡೆ ಗಬ್ಬಗಳು ಈ ಜಾತಿಗೆ ಸೇರಿದ ಪಂಗಡಗಳು. ಇಂತಹ ಸಾಮಾನ್ಯರ ಕನ್ನಡದೊಳಗಿನ ಚತ್ತಾಣ-ಬೆದಂಡೆ ಗಬ್ಬಗಳನ್ನು ಕಾವ್ಯದ ಅಂತಸ್ತಿಗೆ ಮಾರ್ಗಕಾರ ತಂದನೆನ್ನಬಹುದು. ಹಾಗೆಯೇ ನಾಗವರ್ಮನು ೨ ಪದ್ಯಗಳ ಒಂದು ಜೊತೆಪದ, ೧೨ ಪದಗಳ ಪುಂಜ ಮೇಲ್ವಾರು ೧೫ ರಿಂದ ೨೫ ಪದಗಳ ಸಮೂಹ ಪಾಡು, ಪಾಡುಗಳಿಂದ ರಚನೆಗೊಂಡದ್ದು ಪಾಡುಗಬ್ಬ ಇದರಿಂದ ಸಿದ್ಧವಾದುದು ಮೇಲ್ವಾಡು ಬೆದಂಡೆಗಬ್ಬಗಳೆಂದು ಹೇಳುತ್ತಾನೆ.

ಮಾರ್ಗಕಾರನ ಚಿತ್ತಾಣ-ಬೆದಂಡೆ ಹಾಗೂ ನಾಗವರ್ಮನ 'ಬಾಜನೆಗಬ್ಬ'ಗಳನ್ನು ಗಮನಿಸಿದ ವಿದ್ವಾಂಸರಾದ "ಶ್ರೀ ಆರ್.ನರಸಿಂಹಾಚಾರ್, ತೀ.ನಂ.ಶ್ರೀ ಮುಳಿಯವರು ಅಭಿಪ್ರಾಯ ಪಡುವಂತೆ ಇದೊಂದು

- ವಾದ್ಯವನ್ನವಲಂಬಿಸಿ ಹುಟ್ಟಿದ ಕಾವ್ಯಜಾತಿ
- ಇದು ಹಾಡುಗಬ್ಬದ ಒಂದು ಪ್ರಭೇದ
- ಕವಿರಾಜಮಾರ್ಗಕಾರನ ಚತ್ತಣ ಮತ್ತು ನಾಗವರ್ಮನ ಬಾಜನೆಗಬ್ಬ ಎರಡೂ ಒಂದೇ ಎಂದು ಅವರು ಅಭಿಪ್ರಾಯಪಡುತ್ತಾರೆ."[೨೧]

ಒಟ್ಟಿನಲ್ಲಿ ಕವಿರಾಜಮಾರ್ಗಕಾರನ ಪ್ರಕಾರ ಈ ಹಾಡುಗಬ್ಬದಲ್ಲಿ ಹಲವು ಕಂದಗಳ ಮಧ್ಯ ಸುಂದರವಾದ ವೃತ್ತಗಳು. 'ಅಕ್ಕರ, ಚೌಪದಿ, ಗೀತಿಕ, ತ್ರಿಪದಿಗಳು ಅಂದಂ ಬೆತ್ತೆಸೆಂಬುಬೇಕು.' ಅಂದರೆ ಕಂದಗಳ ಪ್ರಮಾಣ ತುಂಬ ಇದ್ದು ಮಧ್ಯ ಮಧ್ಯ ಮಿಕ್ಕವು ಮಿಂಚಬೇಕು ಅದರಂತೆ ನಾಗವರ್ಮನ ಹೇಳಿಕೆಯಂತೆ "ಲಲಿತವ ಚೋರಚನನಿಚಯ ಪದ್ಧತಿಗಳು ಇದ್ದ ಈ ಪ್ರಕಾರ 'ಸರಸಾಬಿಲ ವರ್ಣನ' ಅಂದರೆ ಬಹುಶಃ ೧೮ ವರ್ಣನೆಗಳ ಆಗರ ಹಾಗೆಯೇ ಬೆದಂಡೆಗಬ್ಬವೂ ಪಂಡಿತರ ಕಾವ್ಯಗೋಷ್ಠಿಯಿಂದ ವಂಚಿತರಾದ ಜನಸಾಮಾನ್ಯರಿಗೆ ಪ್ರಿಯವಾದ ಸಾಹಿತ್ಯ ಪ್ರಕಾರ. ಮಾರ್ಗಕಾರನ ಈ ಪ್ರಕಾರಗಳು ಮುಂದೆ ಗದ್ಯಕಥವು 'ವಸ್ತುಕ'ವೆನಿಸಿದರೆ, ವರ್ಣನೆಯನ್ನು ಅವಲಂಬಿಸಿದ ಚೆತ್ತಾಣ ಬೆದಂಡೆಗಬ್ಬಗಳು 'ವರ್ಣಕ'ವೆನಿಸಿ. ಪದ್ಯದತ್ತ ಒಲಿದು ಕವಿರಾಜಮಾರ್ಗದ ಎಡಬಲದಲ್ಲಿ ನಡೆದು 'ವರ್ಣಕಂ ಕಥೆಯೊಳೊಡಂಬಡ ಪಡೆಯ ಪೇಳ್ವಡೆ ಪಂಪನೇ ಪೇಳ್ಗುಂ', 'ದೇಸಿಯೊಳ್ ಪುಗುವುದು ಪೊಕ್ಕು ಮಾರ್ಗದೊಳ್ ತಳ್ವುದು' ಎಂಬ ಧೋರಣೆಯು ಪಂಪನಲ್ಲಿ 'ಸಮನ್ವಯ ಸಿದ್ಧಿ' ಸಾಧ್ಯವಾಯಿತು.

ಹಾಗೆಯೇ ವಚನಕಾರರಿಗೆ ಪೂರ್ವದಲ್ಲಿ ಅಂದರೆ ಸುಮಾರು ೭ ರಿಂದ ೧೨ನೇ ಶತಮಾನದ ಅವಧಿಯಲ್ಲಿ ಬೆದಂಡೆ-ಚೆತ್ತಾಣಂ ಒನಕೆವಾಡು, ಪದ, ಪಾಡು, ಪಾಡುಗಬ್ಬಗಳಂತಹ ಗಾಯನಕ್ಕಾಗಿ ರಚಿತಗೊಂಡ ಸಾಹಿತ್ಯ ಪ್ರಧಾನವಾದ ಹಾಡುಗಳು ರೂಢಿಯಲ್ಲಿದ್ದ ಬಗೆಗೆ ತಿಳಿದು ಬರುತ್ತದೆಯಾದರೂ, ಅವುಗಳಿಗೆ ರಾಗ-ತಾಳಗಳ ನಿರ್ದೇಶನವಿಲ್ಲ. ಅಲ್ಲದೆ ಬಸವಾದಿ ಶರಣರ ಪೂರ್ವದಲ್ಲಿ ಭರತನಾಟ್ಯಶಾಸ್ತ್ರ (ಸು.೨ ರಿಂದ ೪ನೇ ಶತಮಾನ)

- ಮತಂಗನ 'ಬೃಹದ್ದೇಶಿ (ಸು.೫ ರಿಂದ ೯ನೇ ಶತಮಾನ)
- ನಾರದನ ಸಂಗೀತ ಮಕರಂದ (ಸುಮಾರು ೭ನೇ ಶತಮಾನದಿಂದ ೯ನೇ ಶತಮಾನ)
- ಸೋಮೇಶ್ವರನ 'ಅಭಿಲಷಿತಾರ್ಥ ಚಿಂತಾಮಣಿ' ಅಥವಾ 'ಮನಸೋಲ್ಲಾಸ' ಇಂತಹ ಅನೇಕ ಸಂಗೀತ ಪ್ರಧಾನ ಕೃತಿಗಳು ವಚನಕಾರರಿಗಿಂತ ಪೂರ್ವದಲ್ಲಿ ರಚಿತವಾಗಿದ್ದವು. ಈ ಕೃತಿಗಳಲ್ಲಿ ಅನೇಕವುಗಳನ್ನು ಅಲ್ಲದಿದ್ದರೂ ಕೆಲವನ್ನಾದರೂ ವಚನಕಾರರು ಓದಿರಬಹುದು. ಏಕೆಂದರೆ ಶಿವಶರಣರ ವಚನಗಳಲ್ಲಿ ಈ ಗ್ರಂಥಗಳನ್ನಾಧರಿಸಿದ ಭರತವೇಶ, ಭರತ ವಿದ್ಯೆ, ಆಳಾಪ, ಸ್ವರ, ತ್ರಿಸ್ಥಾನ, ರಾಗ, ತಾಳ ಇತ್ಯಾದಿ ಅನೇಕ ಪದಗಳು, ವಾದ್ಯಗಳು ಹಾಗೂ ಕಲೆಗೆ ಸಂಬಂಧಿಯಾದ ಅನೇಕ ವಿಚಾರಗಳು ಹೇಳಲ್ಪಟ್ಟಿದೆ.

ಈ ಹಿನ್ನೆಲೆಯಲ್ಲಿ ಗಮನಿಸಿದಾಗ ೧೨ ಶತಮಾನದ ಪೂರ್ವದಲ್ಲಿದ್ದಂತಹ ಸಂಗೀತಮಯ ಪರಿಸರವೂ ಮುಂದೆ ವಚನಕಾರರಿಗೆ ವಚನ ಹಾಗೂ ಸ್ವರವಚನ ಅಥವಾ ಹಾಡುಗಳನ್ನು ನಿರ್ಮಾಣ ಮಾಡುವಲ್ಲಿ ಪ್ರೇರಣೆ, ಸ್ಫೂರ್ತಿ ನೀಡಿರಬೇಕೆನಿಸುತ್ತದೆ. ಇದರಿಂದ ಕನ್ನಡ ಸಾಹಿತ್ಯ ಸಂಗೀತ ಲೋಕಕ್ಕೆ ಹರಿದಾಸರಿಗಿಂತ ಪೂರ್ವದಲ್ಲಿದ್ದ ವಚನಕಾರರೇ ಆದ್ಯರು ಎನ್ನಬಹುದು.

ಹೀಗೆ ವಚನಕಾರರಿಗೆ ಸಾಹಿತ್ಯ ಮತ್ತು ಸಂಗೀತಗಳ ಪ್ರೇರಣೆ ಪ್ರಭಾವಗಳಿದ್ದ ಶರಣರು ವಚನಗಳನ್ನು ರಚಿಸಿ ಅಂದಿನವರೆಗೆ ಬೇರೂರಿದ್ದ ಶಿಷ್ಟ, ಪಂಡಿತ ಸಾಹಿತ್ಯವನ್ನು ತೊರೆದು ಜನಸಾಮಾನ್ಯರಿಗೆ ಸಮೀಪವೆನಿಸುವ ಸಾಹಿತ್ಯವನ್ನು ರಚಿಸಿದರು. ಈ ವಚನಗಳು ಮುಖ್ಯವಾಗಿ ವೇದ ಉಪನಿಷತ್ತಿನ ಪ್ರಭಾವದಿಂದ ಪ್ರೇರಿತವಾದಂತೆ ಕಂಡುಬರುತ್ತವೆ. ತೀವ್ರಗತಿಯಲ್ಲಿ ಸಮಾಜೋ ಧಾರ್ಮಿಕ ಪರಿವರ್ತನೆಯನ್ನು ಇಚ್ಛಿಸಿದ ಶರಣರಿಗೆ

ಜನಸಾಮಾನ್ಯರ ಆಡುಮಾತಿನ ಸಾಹಿತ್ಯ ಅಗತ್ಯವಾಗಿತ್ತು. ಆದ್ದರಿಂದ ವಚನಗಳ ಮೂಲಕ ಸಾಮಾಜಿಕ ಆಂದೋಲನವನ್ನು ಕೈಗೊಂಡರು. ಅತ್ತ ಗದ್ಯವು ಅಲ್ಲದ ಪದ್ಯವೂ ಅಲ್ಲದ, ವಚನಗಳನ್ನು ಹಾಡಲು ಅನವರತರಾದರು. ಆದರೆ ಈ ವಚನಗಳಿಗೆ ಪಲ್ಲವಿ, ರಾಗ, ತಾಳ, ಅನುಪಲ್ಲವಿಗಳಿರಲಿಲ್ಲ. ವಚನಗಳಿಂದಲೇ ಸಾಕಷ್ಟು ಸಾಮಾಜಿಕ ಪರಿವರ್ತನೆ, ವೀರಶೈವ ಧರ್ಮ ಪ್ರಗತಿ-ಪ್ರಸಾರ ಕಾರ್ಯಗಳನ್ನು ನಡೆಸಿದರು. ಇನ್ನಷ್ಟು ತೀವ್ರಗತಿಯ ಪರಿಣಾಮಕ್ಕೆ ಶರಣರು ಹಾಡುಗಳನ್ನು ರಚಿಸಿದರು. ಸಾಮಾಜಿಕ-ಧಾರ್ಮಿಕ ಆಂದೋಲನಕ್ಕೆ ವಾಚನಗಬ್ಬಕ್ಕಿಂತ ಶ್ರವಣ ಪಾತಳಿಯ ಹಾಡುಗಬ್ಬವು ಹೆಚ್ಚು ಪರಿಣಾಮಕಾರಿ ಎಂಬುದನ್ನು ಮನಗಂಡು ರಾಗ, ಪಲ್ಲವಿ, ತಾಳಗಳನ್ನೊಳಗೊಂಡ ಸ್ವರವಚನ/ಗೀತೆ/ಹಾಡುಗಳನ್ನು ರಚಿಸಿದರೆನ್ನಬಹುದು. ಹಾಡುಗಳ ಉಗಮ ಎಂದು? ಯಾರಿಂದ? ಎಂಬ ವಿಷಯಕ್ಕೆ ಸಂಬಂಧಿಸಿದಂತೆ ವಿದ್ವಾಂಸರು ಹೀಗೆ ಚರ್ಚಿಸಿದ್ದಾರೆ.

ಎಲ್. ಬಸವರಾಜು ತಮ್ಮ ಶಿವದಾಸ ಗೀತಾಂಜಲಿಯ (೧೯೬೩) ಪ್ರಸ್ತಾವನೆಯಲ್ಲಿ "ಇಡೀ ಭಾರತೀಯ ಸಾಹಿತ್ಯಕ್ಕೆ ವಚನವೆಂಬ ಅಭೂತಪೂರ್ವ ಕಾಣಿಕೆಯನ್ನು ಕೊಟ್ಟ ಶಿವದಾಸರು ತಮ್ಮ ಕಾಲಕ್ಕೆ ಅಥವಾ ತತ್ಪೂರ್ವಕ್ಕೆ ಕನ್ನಡದಲ್ಲಿಲ್ಲದಿದ್ದ ಹಾಡುಗಳನ್ನು ಬರೆಯಲು ಮೊದಲಾದರು. ಶಿವಶರಣರು ಬರೆದ ಈ ಹಾಡುಗಳು ಪಲ್ಲವದಿಂದ ಕೂಡಿ ಬೇರೆ-ಬೇರೆ ರಾಗಗಳಲ್ಲಿ ಹಾಡಲೂ ಅನುವರಿತು ರಚಿತವಾದ ಗೇಯ ಕೃತಿಗಳು. ಮುಂದೆ "೧೫-೧೬ನೆಯ ಶತಮಾನಗಳಲ್ಲಿ ಹರಿದಾಸರು ಯಾವ ಕೀರ್ತನ ಸಾಹಿತ್ಯ ಪ್ರಕಾರದಿಂದ ಇಡೀ ದಕ್ಷಿಣ ಭಾರತದ ಸಂಗೀತ ಮತ್ತು ಸಾಹಿತ್ಯ ಪ್ರಪಂಚಗಳೆರಡರಲ್ಲೂ ಅದ್ವಿತೀಯ ಕೀರ್ತಿಯನ್ನು ಗಳಿಸಿದರೋ ಆ ಕೀರ್ತನ ಪ್ರಕಾರಕ್ಕೆ ೧೨ನೇ ಶತಮಾನದ ಬಸವಾದಿ ಶಿವದಾಸರ ಈ ಗೀತ (ಹಾಡುಗಳು) ಪ್ರಕಾರವೂ ಮೂಲವೂ ಮಾದರಿಯೂ ಆಗಿದ್ದವು.""[೧೨]

ಬಸವರಾಜು ಅವರ ಈ ವಾದಕ್ಕೆ ಆಧಾರವಾಗಿ ನಮಗೆ ಉಪಲಬ್ಧವಾಗಿ ಸಿಗುವ ಆರಂಭದ ಹಾಡುಗಳು ಮಹಾಲಿಂಗ ಏಕೋತ್ತರ ಶತಸ್ಥಲ, ಜಕ್ಕಣ್ಣನ ಏಕೋತ್ತರ ಶತಸ್ಥಲ, ಸಿದ್ಧಲಿಂಗನ ಅನಾಮಧೇಯ ಅಂಕಿತ-ಏಕೋತ್ತರ ಶತಸ್ಥಲಗಳಲ್ಲಿ ಹಾಡುಗಳ ಪ್ರಥಮ ದರ್ಶನವಾಗುತ್ತದೆ. ಆದರೂ ಅವು ಬಸವಾದಿ ಪ್ರಮಥರ ಹಾಡುಗಳನ್ನು ಪಿಂಡಾದಿ ಜ್ಞಾನ ಶೂನ್ಯಾಂತವಾದ ನೂರೊಂದು ಸ್ಥಲದ ಪರಿವಿಡಿಯಲ್ಲಿ ಜೋಡಿಸಿರುವರೇ ಹೊರತು, ಆ ವಚನಗಳನ್ನಾಗಲಿ, ಆ ಹಾಡುಗಳನ್ನಾಗಲಿ ರಚಿಸಿದವರು ಅವರಲ್ಲ. ವಚನಗಳಂತೇ ಹಾಡುಗಳು ಶರಣರಿಂದ ರಚಿತವಾಗಿವೆ. ಅವುಗಳನ್ನು ಕಾಲನಂತರದಲ್ಲಿ ಸಂಕಲನಮಾಡಿ ಒಂದು ಕ್ರಮದಲ್ಲಿ ಜೋಡಿಸಿ ಅವುಗಳ ಅಭಿಪ್ರಾಯವನ್ನು ಆಯಾ ಸ್ಥಲದ ಸ್ವರೂಪವನ್ನು ಸ್ಪಷ್ಟಪಡಿಸುವುದಕ್ಕಾಗಿ ಪ್ರತಿಯೊಂದು ಸ್ಥಲದ ಮೊದಲಿಗೆ ಕೊಟ್ಟಿರುವ ಸೂತ್ರ (ಗದ್ಯ) ಮಾತ್ರ ಮಹಾಲಿಂಗ ಮತ್ತು ಜಕ್ಕಣ್ಣರು ರಚಿಸಿದರು ಎಂದು ಹೇಳಿ ಏಕೋತ್ತರ ಶತಸ್ಥಲಕಾರರ ಒಕ್ಕಣೆ ಮತ್ತು ಜಕ್ಕಣ್ಣನ ಏಕೋತ್ತರ ಶತಸ್ಥಲಕ್ಕೆ ಬರೆದ ವ್ಯಾಖ್ಯಾನಕಾರರ ಹೇಳಿಕೆಗಳ ಆಧಾರದಿಂದ ತಮ್ಮ ಹೇಳಿಕೆಗೆ ಸಮರ್ಥನೆಯನ್ನೊದಗಿಸುತ್ತಾರೆ.

ಎಲ್.ಬಸವರಾಜು ಅವರಿಗಿಂತ ಪೂರ್ವದಲ್ಲಿ (೧೯೪೯) "ಶಿ.ಶಿ.ಬಸವನಾಳ ಅವರು ಸರ್ಪಭೂಷಣರ 'ಕೈವಲ್ಯ ಕಲ್ಪವಲ್ಲರಿ' ಕೃತಿಯ ಪ್ರಸ್ತಾವನೆಯಲ್ಲಿ ಹಾಡುಗಬ್ಬಗಳಿಗೆ ಮೊದಲಾದುದು ದಾಸಸಾಹಿತ್ಯದಿಂದಲೇ ಎಂದು ಹೇಳುತ್ತಾರೆ. ಆದರೆ ಇವರ ಈ ಹೇಳಿಕೆಗೆ ನಂಬಲರ್ಹವಾದ ಆಧಾರಗಳು ಲಭ್ಯವಿಲ್ಲ. ಕನ್ನಡ ಸಾಹಿತ್ಯ

ಚರಿತ್ರೆಯನ್ನು ಅವಲೋಕಿಸಿದಾಗ ಆರಂಭದ ಕಾಲದಿಂದಲೂ ವೀರಶೈವ ಸಾಹಿತ್ಯದ ಉದಯದವರೆಗೂ ಹಾಡುಗಬ್ಬಗಳು ಕಂಡುಬರುವುದಿಲ್ಲವೆಂದೇ ಹೇಳಬಹುದು. ಹಾಡುಗಳ ರಚನೆಯಲ್ಲಿ ವೀರಶೈವ ಬರಹಗಾರರಿಗೇ ಅಗ್ರಸ್ಥಾನ ಸಲ್ಲುವುದು. ಅಷ್ಟೇ ಅಲ್ಲ ಈ ಕಾರ್ಯದಲ್ಲಿಯೂ ಬಸವಾದಿಗಳೇ ಪುರಸ್ಕೃತರು ಎಂಬುದು ಕರ್ನಾಟಕ ಕವಿಚರಿತೆಯನ್ನು ಅವಲೋಕಿಸುವುದರಿಂದ ಸ್ಪಷ್ಟಗೊಳ್ಳುತ್ತದೆ ಎಂಬುದನ್ನು ಚೆನ್ನಬಸವಣ್ಣ, ಪ್ರಭುದೇವರ ಮಂತ್ರಗೋಪ್ಯ, ಪದಮಂತ್ರ ಗೋಪ್ಯ, ಸಿದ್ಧರಾಮ ಅಕ್ಕಮಹಾದೇವಿಯ ತ್ರಿವಿಧಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುತ್ತಾರೆ."[೧೩]

ಎಲ್. ಬಸವರಾಜು ಅವರು ಹಾಡುಗಳ ಉಗಮವು ಬಸವಾದಿ ಪ್ರಮಥರಿಂದ ಎಂಬುದಕ್ಕೆ ಆಧಾರಗಳನ್ನು ಒದಗಿಸುವುದರಿಂದ ಅವರ ಹೇಳಿಕೆಯು ಸಮಂಜಸ ಎನಿಸುತ್ತದೆ. ಎಂ.ಚಿದಾನಂದಮೂರ್ತಿ (೧೯೭೫) ಅವರು "ವಚನಕಾರರಿಂದ ರಚಿತವಾಗಿದೆ ಎನ್ನಬಹುದಾದ ಕೆಲ ಅಂಕಿತಗಳನ್ನೊಳಗೊಂಡ ಹಾಡುಗಳು ದೊರತಿವೆ. ಆದರೆ ಅವನ್ನು ಅವರೇ ರಚಿಸಿದವರು ಎಂಬುದಕ್ಕೆ ಆಧಾರಗಳಿಲ್ಲ. ಹಿಂದೆ ಶರಣರು ಬರೆದ ವಚನಗಳನ್ನು ಈಚಿನವರು ತಮ್ಮ ಅನುಕೂಲಕ್ಕಾಗಿ ಹಾಡುಗಳಾಗಿ ಪರಿವರ್ತಿಸಿರಬಹುದು. ಎಂಬುದಕ್ಕೆ ಕೆಲ ಉದಾಹರಣೆಗಳನ್ನು ನೀಡಿ ಕೊನೆಗೆ ಹಾಡುಗಳು ಒಂದು ದೃಷ್ಟಿಯಿಂದ ಶಿವಶರಣವೇ: ಇನ್ನೊಂದು ದೃಷ್ಟಿಯಿಂದ ಅವರವಲ್ಲ ಎಂದು ಅಭಿಪ್ರಾಯ ಪಡುತ್ತಾರೆ."[೧೪]

ವಿ.ಶಿವಾನಂದ ಅವರು (೧೯೭೮) ಎಲ್.ಬಸವರಾಜು ಅವರ ಅಭಿಪ್ರಾಯವನ್ನು ಅಲ್ಲಗೆಳೆದು ಹಾಡುಗಳು ಶರಣರಿಂದ ರಚಿತವಾದುವಲ್ಲ. "ಶರಣರ ವಚನಗಳನ್ನು ಸ್ವರವಚನಗಳಲ್ಲಿ ದುಡಿಸಿಕೊಳ್ಳುವ ವಿಶಿಷ್ಟ ಪರಂಪರೆಗೆ ಏಕೋತ್ತರ ಶತಸ್ಥಲಕಾರರು ಆದ್ಯ ಪ್ರವರ್ತಕರೆನ್ನಬಹುದು. ಇದನ್ನೇ ಮುಂದೆ ಶೂನ್ಯಸಂಪಾದನೆ ಗ್ರಂಥಗಳು ಅನುಸರಿಸಿವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುವುದರ ಜೊತೆಗೆ ಮೂಲದಲ್ಲಿ ವಚನಗಳಿಗೆ ತನ್ನದೇ ಆದ ಲಯ, ಭಾವಗಳಿದ್ದವು ಆ ಲಯ-ಭಾವನೆಗಳಿಗೆ ಸಂಗೀತದ ಲಕ್ಷ್ಯ-ಲಕ್ಷ್ಯಣಗಳು ಪ್ರಾಪ್ತವಾಗಿ ಹಾಡುಗಳ ಪ್ರಕಾರ ಸ್ವತಂತ್ರವಾಗಿ ೧೫ನೆಯ ಶತಮಾನದಲ್ಲಿ ಬೆಳೆದಿದೆ"[೧೫] ಎಂದು ತಿಳಿಸುತ್ತಾರೆ.

ಈ ಮೇಲಿನ ಎಲ್ಲಾ ಹೇಳಿಕೆಗಳನ್ನು ಗಮನಿಸುತ್ತಾ 'ವೀರಣ್ಣ ರಾಜೂರ' ಅವರು ಹಾಡುಗಳ ಉಗಮವು ಶರಣರಿಂದಲೇ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಅದಕ್ಕೆ ಪೂರಕವಾಗಿ ಇನ್ನಷ್ಟು ಆಧಾರಗಳನ್ನು ನೀಡುತ್ತಾರೆ. ಚೆನ್ನವೀರಾರ್ಯನ (೧೬ನೇ ಶತಮಾನ) 'ಶಿವಯೋಗ ಪ್ರದೀಪಿಕೆ' ಮತ್ತು ಕಂಬಾಳ ಶಾಂತಮಲ್ಲೇಶ (೧೬೦೦)ನ 'ಗಣವಚನ ರತ್ನಾವಳಿ' ಪ್ರಮುಖವಾಗಿ ಸ್ವರವಚನ ಅಥವಾ ಹಾಡುಗಳ ಸಂಕಲನ ಕೃತಿಗಳು. ಅವುಗಳಲ್ಲಿ ಬಸವಾದಿ ಶರಣರ ಹಾಡುಗಳು ಸಮಾವೇಶಗೊಂಡಿದ್ದು ಅವುಗಳ ಕರ್ತೃಗಳು ಸಕಲ ಪುರಾತನರು ಎಂದು ತಿಳಿಸಿದ್ದಾರೆ.

ಶಿವಯೋಗ ಪ್ರದೀಪಿಕೆಯ ಆದಿಯ 'ಪೀಠಿಕಾ ಸ್ವರದೊಳ್ಲಿ' ಎಂಬ ಪಟ್ಟಿದಿಯಲ್ಲಿ ಹೀಗೆ ಹೇಳಲಾಗಿದೆ.

"ಶ್ರೀಮದ್ದೇಶಿಕ ಚೆನ್ನವೀರಾರ್ಯಂ
ಆ ಮಹಾ ಸಕಲ ಪುರಾತನರ ಗೀತನೆ
ನೇಮಿಸಿಯು ಸೂಚನಾರ್ಥ ಪದಂಗಳವರಂ ಸ್ಥಲವಿಟ್ಟು|

ಈ ಮಹಿಯೊಳು ಹೊಸತೆನೆ ಸಂಗ್ರಹಿಸಿಯು
ಪ್ರೇಮದಿ ಶಿವಲಿಂಗದೇವಂ ಗೊರೆದನು
ನಾಮವಿದರ ಶಿವಯೋಗ ಪ್ರದೀಪಿಕೆ ಶರಣರು ಅವಧರಿಸಿ"

ಈ ಕೃತಿಯಲ್ಲಿ ೧೮ ಜನ ಶರಣರ ಒಟ್ಟು ೭೩ ಸ್ವರವಚನಗಳು ಸಂಗ್ರಹವಾಗಿವೆ. ಅವರಲ್ಲಿ ೧೧ ಜನ ೧೨ನೆಯ ಶತಮಾನದ ಬಸವಾದಿ ಶರಣರಾದರೆ ಉಳಿದ ೭ ಜನ ೧೫ನೆಯ ಶತಮಾನಕ್ಕೆ ಸೇರಿದ ಕರಸ್ಥಲನಾಗಿದೇವನಾದಿಯಾಗಿ ನೂರೊಂದು ವಿರಕ್ತರು. ಹಾಗೆಯೇ 'ಗಣವಚನ ರತ್ನಾವಳಿ'ಯ ಆದಿ ಮತ್ತು ಅಂತ್ಯದ ಕಂದ, ಷಟ್ಪದಿಗಳಲ್ಲಿ ಸು೬೨ ಜನ ಶರಣರ ೨೧೬ ಹಾಡುಗಳು ಸಂಗ್ರಹವಾಗಿವೆ. ಅದರಲ್ಲಿ ಸುಮಾರು ೧೫ ಜನ ಶರಣರು ೧೩ನೆಯ ಶತಮಾನದವರಾಗಿದ್ದಾರೆ. ಎಂದು ರಾಜೂರ ಅವರು ಎರಡು ಕೃತಿಗಳ ಉದಾಹರಣೆಯ ಸಮೇತವಾಗಿ ಎಷ್ಟು ಜನ ಶರಣರು ಹಾಡುಗಳನ್ನು ರಚಿಸಿದರೆಂದು ತಿಳಿಸುತ್ತಾರೆ. ಆ ಎರಡು ಕೃತಿಗಳು ಶರಣರೇ ಸ್ವರವಚನಗಳನ್ನು ರಚಿಸಿರುವರೆಂದು ಸ್ಪಷ್ಟಪಡಿಸುತ್ತವೆ.

ವಚನಗಳ ಜೊತೆ ಸ್ವರವಚನಗಳನ್ನು ಸಂಯೋಜಿಸಲಾದ ಮಹಾಲಿಂಗನ ಏಕೋತ್ತರ ಶತಸ್ಥಲ ಸೂಕ್ಷ್ಮ-ಮಿಶ್ರಷಟ್‌ಸ್ಥಲ, ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ ಉಳಿದ ಸಂಪಾದನೆ ಇಂತಹ ಅನೇಕ ಕೃತಿಗಳಲ್ಲಿ ಹಾಡುಗಳನ್ನು ರಚಿಸಿದವರು ಬಸವಾದಿ ಶರಣರೆಂದು ಹೇಳಿದೆಯಲ್ಲಿದೆ ಸಂಯೋಜಕರೇ ವಚನಗಳನ್ನು ಸ್ವರವಚನಗಳನ್ನಾಗಿ ಪರಿವರ್ತಿಸಿ ಸೇರಿಸಿಕೊಂಡಿದ್ದಾರೆ ಎಂದು ತಿಳಿಸಿಲ್ಲ.

ಹೀಗೆ ಈ ಎಲ್ಲ ವಿದ್ವಾಂಸರ ಅಭಿಪ್ರಾಯಗಳನ್ನು ಅನುಲಕ್ಷಿಸಿ ಪ್ರಾರಂಭದಲ್ಲಿ ಹೇಳಿರುವಂತೆ ವಚನಕಾರರ ವಚನಗಳಲ್ಲಿ ತಾವು ಹಾಡುಗಳನ್ನು ಹಾಡಿರುವುದಕ್ಕೆ ತಾವೇ ಹೇಳಿರುವ ಉದಾಹರಣೆಗಳನ್ನು ಗಮನಿಸಿ. ಇದಕ್ಕೆ ಪೂರಕ ಆಧಾರವೆಂಬಂತೆ ಬಸವಾದಿ ಪ್ರಮಥರ ಪೂರ್ವದಲ್ಲಿ ನಾಯನ್ಮಾರರಲ್ಲಿ ಹಾಡಿನ ಸಂಪ್ರದಾಯವಿದ್ದು. ಅದರ ಜೊತೆ ಕವಿರಾಜ ಮಾರ್ಗಕಾರನು ಹೇಳುವ ಚಿತ್ರಾಣ-ಬೆದಂಡೆಗಳನ್ನು ಗಮನಿಸುವುದರಿಂದ ವಚನಕಾರರಿಗೆ ಇವೆಲ್ಲವುಗಳ ಪ್ರೇರಣೆ ಪ್ರಭಾವವು ಇರುವುದರಿಂದ ಅವರುಗಳು ಹಾಡುಗಳನ್ನು ರಚಿಸಿರುವುದಕ್ಕೆ ಆದ್ಯರೆಂದು ಹೇಳಬಹುದು.

ಶಿವದಾಸರ ಈ ಹಾಡುಗಳ ನಮಗೆ ದೊರೆಯುವ ಮೊದಲನೇ ಮೂಲವೆಂದರೆ ಮಹಲಿಂಗ, ಜಕ್ಕಣ್ಣ ಮತ್ತು ಸಿದ್ಧಲಿಂಗೇಶ್ವರಾಂಕಿತದ, ಅನಾಮಧೇಯನೊಬ್ಬ ಈ ಮೂವರ ಮೂರು ಏಕೋತ್ತರ ಶತಸ್ಥಲಗಳು ಮತ್ತು ೨೧೬ ಸ್ಥಲದ ಗಣವಚನ ರತ್ನಾವಳಿ, ಎರಡನೆಯ ಮೂಲ ಶೂನ್ಯಸಂಪಾದನೆಗಳು, ಮೂರನೆಯದು "ಶಿವಯೋಗ ಪ್ರದೀಪಿಕೆ" ಎಂಬ ಹಾಡುಗಳ ಸಂಕಲನ ಗ್ರಂಥ, ನಾಲ್ಕನೆಯದು ಮತ್ತು ಕೊನೆಯದು ಸಿಂಗಿರಾಜ ಪುರಾಣದಂತಹ ವೀರಶೈವ ಪುರಾಣ ಮತ್ತು ಧಾರ್ಮಿಕ ಗ್ರಂಥಗಳು.

೧೨ನೆಯ ಶತಮಾನದಲ್ಲಿ ಶರಣರಿಂದ ಗೀತೆಗಳು ಪ್ರಾರಂಭದಲ್ಲಿ ವಚನಗಳ ಹೆಸರಿನಲ್ಲಿ ಚಿತ್ರಿತವಾಗಿ ಮುಂದೆ ಹಾಡುಗಳಾಗಿ ಪರಿವರ್ತಿತ ರೂಪ ಪಡೆದುಕೊಂಡವು. ಬಸವೋತ್ತರ ಯುಗದಲ್ಲಿ ಸ್ವರವಚನ, ಹಾಡು, ಪದ, ಸ್ವರಪದ, ಅನುಭಾವ ಪದ, ತತ್ವಪದ, ಭಜನೆಪದ ಏಕಕಾರಿಪದ, ಕೈವಲ್ಯಪದ, ವೈರಾಗ್ಯಪದ ಮೊದಲಾದ

ಹೆಸರುಗಳಿಂದಲೂ ಪ್ರಸಿದ್ಧಿ ಪಡೆದಿದೆ. ಹಾಡುಗಳು ಮುಖ್ಯವಾಗಿ ಆಯಾ ಪ್ರದೇಶದ ಅನುಭಾವಿ, ಶಿವಯೋಗಿ, ಶರಣ, ಮಠಾಧಿಪತಿ ಹಾಗೂ ಮಹಾತ್ಮರಿಂದ ರಚಿತವಾಗಿರುತ್ತವೆ. ಇವುಗಳನ್ನು ವೀರಶೈವರಲ್ಲದೆ ಬ್ರಾಹ್ಮಣ, ಹರಿಜನ, ಮುಸ್ಲಿಂ ಮುಂತಾದ ಮತೀಯರು ಬರೆದಿದ್ದಾರೆ.

ಈಗ ಉಪಲಬ್ಧವಾದ ಸ್ವರವಚನ/ಗೀತೆಗಳ ಸಾಹಿತ್ಯವನ್ನು ಗಮನಿಸಿ ಹೇಳುವುದಾದರೆ, ಈಚೆಗೆ ಪ್ರಕಟವಾದ ಗಣವಚನ ರತ್ನಾವಳಿಯಲ್ಲಿ ಎಡೆಪಡೆದ- ಜೇಡರ ದಾಸಿಮಯ್ಯನಿಂದ ರಚಿತವಾದ ಒಂದು ಹಾಡೇ ಅತ್ಯಂತ ಪ್ರಾಚೀನವಾದುದೆಂದು ತಿಳಿದುಬರುತ್ತದೆ. ಶಂಕರಾಭರಣ ರಾಗದಲ್ಲಿ ಹಾಡಿರುವ 'ಶಿವಲಿಂಗದ ಮಾರನೆ' ಹಾಡು ಅತೀ ಪ್ರಾಚೀನವಾದುದು.

**ರಾಗ : ಶಂಕರಾಭರಣ**

ತಂಗಾಳಿಗಲಿರು ಮಾರನೆ, ಎ-
ನ್ನಂಗದೊಳಿರ್ಪ ಶಿವಲಿಂಗದ ಮರನೆ! ||ಪಲ್ಲವಿ||
ಸಂಪನೆಯ ಮರನನೇಱು ಪರಿಮಳದ
ಕಂಸ ಕೊಯ್ಯು ನಾರೆಲೋ ಇಂಪುಳ್ಳ
ಜಾಣ ನಲ್ಲಮ ಕಾಣೆ ಕೆಳದಿ!
ಎಲೆಯಿಲ್ಲದುಲಿವ ಮರನೆ ನಿಲಲುಂಟೆ?
ನೆಳಲಿಲ್ಲದಿಪ್ಪ ಮರನೆ ನಿನ್ನ ಹೊಲಬ
ತೆಲ ಹೊಲದಲ್ಲಿ ಕಂಡೆ ನಾ ಮರನೆ!
......................................
......................................
ಚಿತ್ತಶುದ್ಧವ ಮಾಡು ಸಕಲೇಶ ಕೆಳದಿ (ಶಿ.ಗೀ. ಪು. ೨೬೧)

ಸಕಲೇಶಮಾದರಸನ ಈ ಹಾಡು ತ್ರಿಪದಿ ಛಂದಸ್ಸಿನಲ್ಲಿದ್ದು, ಅತ್ಯಂತ ಪ್ರಾಚೀನವಾದ ಉಪಲಬ್ಧ ಹಾಡಾಗಿದೆ. ಆದರೆ ಇತ್ತೀಚಿನ ಉಪಲಬ್ಧ ಗಣವಚನ ರತ್ನಾವಳಿಯಲ್ಲಿ ಎಡೆ ಪಡೆದ ಜೇಡರ ದಾಸಿಮಯ್ಯನಿಂದ ರಚಿತವಾದ ಹಾಡೇ ಅತ್ಯಂತ ಪ್ರಾಚೀನವಾದುದೆಂದು ತಿಳಿದುಬರುತ್ತದೆ.

“ನಿಜವಾಗದೆಂದು ಗಜಬಜೆ(1) ಘನ
ಗುಜುಗುಜು ಮಾಣದು ಮನದಲಿ ||ಪಲ್ಲವಿ||

ಎನ್ನುವ ಹಾಡು ದಾಸಿಮಯ್ಯ ರಚಿತವಾದ ಪ್ರಾಚೀನ ಗೀತೆಯಾಗಿದೆ. ಹೀಗೆ ಹಾಡುಗಳ ಕಿರು ಕೋರೆ ದಾಸಿಮಯ್ಯನಿಂದ ಆರಂಭವಾಗಿ ಬಸವಾದಿ ಪ್ರಮಥರಲ್ಲಿ ದೊಡ್ಡ ತೊರೆಯಾಗಿ ಹರಿಯಿತು. ಆರಂಭದ ಕಾಲದಿಂದ ಇಂದಿನವರೆಗಿನ ಸ್ವರವಚನ ಅಥವಾ ಹಾಡುಗಳು ಬೆಳೆದು ಬಂದ ಚರಿತ್ರೆಯನ್ನು ಅನೇಕ ವಿದ್ವಾಂಸರು ವಿವಿಧ

ಘಟ್ಟಗಳಾಗಿ, ಅಧ್ಯಾಸದ ಅನುಕೂಲಕ್ಕಾಗಿ ವಿಭಾಗಿಸುತ್ತಾರೆ. ಎಲ್.ಬಸವರಾಜು ಅವರು ಪ್ರಮುಖವಾಗಿ ಮೂರು ಘಟ್ಟಗಳಲ್ಲಿ ವಿಭಾಗಿಸುತ್ತಾರೆ.

"೧. ಬಸವಪೂರ್ವದ ಹಾಡುಗಳು

೨. ಬಸವ ಸಮಕಾಲೀನ ಹಾಡುಗಳು

೩. ವಾಗ್ಗೇಯಕಾರರ ಹಾಡುಗಳು

ಎಸ್.ವಿದ್ಯಾಶಂಕರ ನಾಲ್ಕು ಘಟ್ಟಗಳನ್ನಾಗಿ ವಿಭಾಗಿಸುತ್ತಾರೆ.

೧. ಬಸವಾದಿ ಶಿವಶರಣರ ಕಾಲ

೨. ವೀರಶೈವ ಪುನರುಜ್ಜೀವನ ಕಾಲ

೩. ಮೂರನೆಯ ಘಟ್ಟ ಜಿಗುಣಿ ಮರುಳಾರಾಧ್ಯ ಮೊದಲಾದವರ ಕಾಲ

೪. ಚಿದಾನಂದ ಅವಧೂತ ಮೊದಲಾದವರ ಕಾಲ"[೧೬]

ಹೀಗೆ ಅನೇಕ ವಿದ್ವಾಂಸರು ಹಾಡುಗಳ ಉಗಮ-ವಿಕಾಸವನ್ನು ವಿಭಾಗಿಸುತ್ತಾರೆ. ಈ ಎಲ್ಲ ವಿಭಾಗಗಳನ್ನು ಒಟ್ಟಾರೆಯಾಗಿ ಅನುಲಕ್ಷಿಸಿ ಮುಂದಿನಂತೆ ನೋಡಬಹುದಾಗಿದೆ.

**ಬಸವಪೂರ್ವಯುಗದ ಹಾಡುಗಳು ಅಥವಾ ಸ್ವರವಚನ ಸಾಹಿತ್ಯ:** ಬಸವಾದಿ ಶರಣರ ಪೂರ್ವದಲ್ಲಿ ಹಾಡುಗಳು ರಚನೆಯಾಗಿರಬಹುದು. ಆದರೆ ಅಂತಹ ಹಾಡುಗಳು ಉಪಲಬ್ಧವಿಲ್ಲದ ಕಾರಣ ಬಸವಾದಿ ಶರಣರ ಯುಗದಲ್ಲಿ ಸಿಕ್ಕಷ್ಟು ಹಾಡುಗಳು ಪೂರ್ವದಲ್ಲಿ ಲಭ್ಯವಿಲ್ಲ. ಆದರೂ ಬಸವಪೂರ್ವಯುಗದ ವಚನಕಾರರು ಸಾಕಷ್ಟು ಹಾಡುಗಳನ್ನು ರಚಿಸಿರಬಹುದು. ಆದರೆ ಆಧಾರವಾಗಿ ಯಾವುವು ಲಭ್ಯವಿಲ್ಲ. ಇತ್ತೀಚಿನ ಶೋಧನೆಗಳ ಪ್ರಕಾರ ದಾಸಿಮಯ್ಯನ ಒಂದು ಹಾಡು ಲಭ್ಯವಿದ್ದು ಅದೇ ಪ್ರಾಚೀನವಾಗಿದೆ. ಇವರ ನಂತರದ ಸ್ಥಾನ ಸಕಲೇಶ ಮಾದರಸನ 'ಶಿವನೆ ಮಾರನೆ' (ಹಿಂದೆ ಪ್ರಸ್ತಾಪಿಸಲಾಗಿದೆ) ಹಾಡು ದಾಸಿಮಯ್ಯನ ತರುವಾಯ ಇದು ಪ್ರಾಚೀನ ಹಾಡಾಗಿದೆ.

ಹಾಡುಗಳ ಉಗಮವು ಜನಪದ ಹುಟ್ಟಿನಿಂದಲೇ ಕಂಡುಬರುತ್ತದೆ. ಇಂತಹ ಹಾಡುಗಳ ಸಾಹಿತ್ಯ ರೂಪದ ಭಾಗವಾಗಿ ಮಾರ್ಗಕಾರನಲ್ಲಿಯ ಚೆತ್ತಾಣ-ಬೆದಂಡೆಗಳ ಪ್ರಸ್ತಾಪವು ಕಂಡುಬರುತ್ತದೆ. ಮಾರ್ಗಕಾರನಲ್ಲಿ ಇದರ ಹೊಳವುಗಳು ಕಂಡರೂ ಅದರ ನಿರ್ದಿಷ್ಟ-ಸ್ಪಷ್ಟ ರೂಪವು ಶಿವಶರಣರಿಂದಲೇ ಕಂಡುಬರುತ್ತದೆ. ಅದು ದಾಸಿಮಯ್ಯನ ಆದಿಯಾಗಿ ಆರಂಭಗೊಂಡು. ಸಕಲೇಶ ಮಾದರಸನಿಂದೊಡಗೂಡಿ ಮುಂದೆ ಬಸವಾದಿ ಶರಣರಲ್ಲಿ ಹಾಡುಗಳ ತೊರೆಯು ದೊಡ್ಡ ತೊರೆಯಾಗಿ ಹರಿಯಿತು.

## ಬಸವಯುಗ

ಬಸವಾದಿ ಶಿವಶರಣರ ಹಾಡುಗಳು ಆತ್ಮನಿವೇದನೆ, ವೀರಶೈವ ತತ್ತ್ವ ಪ್ರತಿಪಾದನೆಗೆ ಮೀಸಲಾದಂಥವು. ಶರಣರು ವಚನಗಳನ್ನು ರಚಿಸುವುದರ ಜೊತೆಗೆ ರಾಗ-ತಾಳಯುಕ್ತವಾದ ಹಾಡಿನ ಸಾಹಿತ್ಯವನ್ನು ರಚಿಸಿದರು. ಈ

ಬಗೆಯ ರಚನೆಗಳು ವಚನ ಸಾಹಿತ್ಯ ದೊರಕುವ ಹಸ್ತಪ್ರತಿ ಕಟ್ಟುಗಳಲ್ಲಿ ಅಲ್ಲಲ್ಲಿ ದೊರೆತಿವೆ. ವಚನಗಳಿಗೆ ಹೋಲಿಸಿದರೆ ಹಾಡುಗಳ ಪ್ರಮಾಣ ಕಡಿಮೆ. ಸುಮಾರು ೧೮ ರಿಂದ ೨೦ರಷ್ಟು ವಚನಕಾರರು ಸ್ವರವಚನಗಳನ್ನು ರಚಿಸಿರುವುದಾಗಿ ತಿಳಿದು ಬರುವುದಲ್ಲದೆ. ಇವರ ಕಾಲದ ಸ್ವರವಚನಗಳ ಸಂಖ್ಯೆ ಸುಮಾರು ೩೫೦ ಎಂದು ವೀರಣ್ಣ ರಾಜೂರು ಒಂದು ಅಂದಾಜು ಮಾಡುತ್ತಾರೆ. ಆದರೆ ಇವೆಲ್ಲ ಸ್ವರವಚನಗಳು ಒಂದೆಡೆ ಲಭ್ಯವಿಲ್ಲ. ಎಲ್.ಬಸವರಾಜು ಅವರು ಈ ಪೈಕಿ ಅಲ್ಲಮಪ್ರಭುವಿನ-೨೮, ಬಹುರೂಪಿ ಚೌಡಯ್ಯನವು-೪, ನಿಜಗುಣರ-೭, ಅಕ್ಕಮಹಾದೇವಿಯ-೧೭, ಸಿದ್ಧರಾಮಯ್ಯನ-೩, ನೀಲಲೋಚನೆಯ-೨, ಬಸವಣ್ಣನ-೨೧, ಚೆನ್ನಬಸವಣ್ಣನ-೬೦, ಸೊಡ್ಡಳ ಬಾಚರಸನ-೩, ಅಮುಗಿದೇವಯ ಅಗ್ಗವಣಿ ಹೊನ್ನಯ್ಯ, ಪುಷ್ಪದ ಸೋಮಯ್ಯ ಇವರವು ಎರಡೆರಡು, ಚಿಕ್ಕಯ್ಯ, ಹಾವಿನಾಹಾಳ ಕಲ್ಲಯ್ಯ, ಅಗ್ಗಣಿಯ ಹಂಪಯ್ಯ, ಸಕಲೇಶ ಮಾದರಸ ಮತ್ತು ಆದಯ್ಯ ಇವರವು ಒಂದೊಂದು ಹಾಡುಗಳನ್ನು ಸಂಕಲಿಸಿ ರಾಜೂರ ಅವರು ಸಂಪಾದಿಸಿದ 'ಶಿವಯೋಗ ಪ್ರದೀಪಿಕೆ' ಪ್ರಸ್ತಾವನೆಯಲ್ಲಿ ೬೦ ಹೊಸ ಸ್ವರ ವಚನಗಳನ್ನು ಸಂಕಲಿಸಿರುವುದು ಕಂಡುಬರುತ್ತದೆ. ಎಂ.ಎಂ.ಕಲಬುರ್ಗಿಯವರು 'ಆದಯ್ಯನ ಲಘುಕೃತಿ'ಗಳಲ್ಲಿ 'ಆದಯ್ಯಗಳ ಕಂದ' 'ಉಯ್ಯಾಲಪದ', ಮಕ್ತಿಕ್ಷೇತ್ರ ಎಂಬ ಪದ್ಯ ಕೃತಿಗಳಲ್ಲದೆ ಆತನ ೨೦ ಸ್ವರವಚನಗಳನ್ನು ಸಂಗ್ರಹಿಸಿದರೆ, ಈ ಎಲ್ಲವುಗಳು ಒಟ್ಟಾರೆ ಸೇರಿಸಿದರೆ ೩೫೦ಕ್ಕೂ ಅಧಿಕವಾಗಬಹುದು.

ಶರಣರ ಹಾಡುಗಳ ಮೂಲವು ಸಿಗುವುದು ಮಹಾಲಿಂಗ, ಜಕ್ಕಣ್ಣ, ಸಿದ್ಧಲಿಂಗನೆಂಬ ಅನಾಮಧೇಯನ ಏಕೋತ್ತರ ಶತಸ್ಥಲಗಳು, ಶೂನ್ಯಸಂಪಾದನೆಗಳು, ಸಿಂಗಿರಾಜ ಪುರಾಣ. ಏಕೋತ್ತರ ಶತಸ್ಥಲದ ಮಹಾಲಿಂಗ ಮತ್ತು ಜಕ್ಕಣ್ಣರು ಬಸವಾದಿ ಪ್ರಮಥರ ಹಾಡುಗಳನ್ನು ಒಂದೆಡೆ ಸೇರಿಸಿ. ಅವುಗಳನ್ನು ನೂರೊಂದು ಸ್ಥಲಕ್ಕೆ ಅನುಗುಣವಾಗಿ ಜೋಡಿಸಿದರು. ಅಲ್ಲದೇ ಷಟ್‌ಸ್ಥಲ ಅಷ್ಟಾವರಣಗಳ ತತ್ತ್ವದಡಿ ಇವುಗಳನ್ನು ಸಂಕಲಿಸಲಾಗಿದೆ. ಹಾಗೂ ಅವುಗಳಿಗೆ ಬಸವಾದಿ ಪ್ರಮಥರ ಅಂಕಿತಗಳಿವೆ. ಕೆಲ ವಿದ್ವಾಂಸರು ಹಾಡುಗಳಿಗೆ ಆದ್ಯರು ಏಕೋತ್ತರ ಶತಸ್ಥಲಕಾರರೇ ಎಂಬ ಅಭಿಮತವನ್ನು ವ್ಯಕ್ತಪಡಿಸಿರುವರು. ಅದಕ್ಕೆ ನಂಬಲರ್ಹವಾದ ಆಧಾರಗಳಿಲ್ಲ. ಅಲ್ಲದೆ ಏಕೋತ್ತರ ಶತಸ್ಥಲಗಳಿಗೆ ಬರೆದ ಟೀಕು, ಶೂನ್ಯಸಂಪಾದನೆಯಂತಹ ಕೃತಿಗಳಲ್ಲಿ ಬಸವಾದಿ ಶರಣರೇ ಹಾಡುಗಳನ್ನು ರಚಿಸಿದರೆಂದು ಹೇಳಿದೆ, ಶರಣರು ಸಹ ತಾವು 'ಪದಂಗಳಂ' ಹಾಡಿದೆವೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಬಸವಾದಿ ಶರಣರೇ ವಚನಗಳಿಗೆ ಮೂಲವೆಂದು ಹೇಳಬಹುದು.

೧೨ನೆಯ ಶತಮಾನದ ಆಸುಪಾಸಿನ ಶರಣರಿಂದ ರಚನೆಗೊಂಡ ಸಾಹಿತ್ಯವನ್ನು ಬಸವರಾಜು ಅವರು ಸ್ಥೂಲವಾಗಿ ವರ್ಗೀಕರಿಸುತ್ತಾ ಹೀಗೆ ಹೇಳುತ್ತಾರೆ.

೧. "ಕಂದ-ವೃತ್ತಗಳ ಪದದ್ಯ ಸಾಹಿತ್ಯ ಈ ರೀತಿಯ ಸಾಹಿತ್ಯಕ್ಕೆ ಕೊಂಡಗುಳಿ ಕೇಶಿರಾಜನನ್ನು ಉದಾಹರಿಸಬಹುದು.

೨. ಪ್ರಭುದೇವರ ಮಂತ್ರಗೋಪ್ಯ, ಚೆನ್ನಬಸವಣ್ಣನವರ ಮಂತ್ರಗೋಪ್ಯ ಮುಂತಾದ ಇನ್ನೊಂದು ವರ್ಗದ ಪದ್ಯ ಪ್ರಕಾರ.

೩. ಮಹಾದೇವಿಯಕ್ಕನ 'ಯೋಗಾಂಗ ತ್ರಿವಿಧಿಯಂಥ 'ತ್ರಿಪದಿ ಶತಕ ಸಾಹಿತ್ಯ'

೪. 'ಉಯ್ಯಾಲಪದ' 'ಮುಕ್ತಿಕ್ಷೇತ್ರಗಳೆಂಬ ರಚನೆಗಳು ವಿಶೇಷ ರೀತಿಯ ಇನ್ನೊಂದು ಪದ್ಯ ಪ್ರಕಾರ

೫. ಐದನೆಯ ಪ್ರಕಾರದಲ್ಲಿ ಸ್ವರವಚನ ಸಾಹಿತ್ಯ ಅಥವಾ ಹಾಡು, ಗೀತೆ ಪ್ರಕಾರವು ಒಂದು. ಇವು ಷಟ್ಪದಿ ತ್ರಿಪದಿಗಳಂತೆ ಮಹತ್ವವುಳ್ಳ ಸಾಹಿತ್ಯವಾಗಿದ್ದು. ಇವು ಇತರ ಸಾಹಿತ್ಯಗಳಿಗಿಂತ ಭಿನ್ನವೆನ್ನುವುದನ್ನು ಅದರ ಲಕ್ಷಣಗಳಿಂದ ಗುರುತಿಸಬಹುದು. ಹಾಡುಗಳು ಬಹಳಷ್ಟು ಹಸ್ತಪ್ರತಿಗಳಲ್ಲಿ ರಾಗ-ತಾಳಗಳನ್ನು ಸೂಚಿಸಿರುವುದು. ಬಹುಮುಖ್ಯವಾದ ಒಂದು ಅಂಶ. ರಾಗ ಸೂಚನೆಯಿಲ್ಲದೆ ಅಥವಾ ರಾಗ ಸೂಚನೆ ಮಾತ್ರವಿದ್ದು. ತಾಳ ಸೂಚನೆಯಿಲ್ಲದ ಹಲವು ಉದಾಹರಣೆಗಳು ಹಸ್ತಪ್ರತಿಗಳಲ್ಲಿವೆ. ಅದನ್ನು ಈ ಉದಾಹರಣೆ ಮೂಲಕ ನೋಡಬಹುದು.

| ಸಂಕಲನ | ಪದ್ಯಸಂಖ್ಯೆ | ರಾಗ | ತಾಳ |
|---|---|---|---|
| ೧. ಶಿವದಾಸ ಗೀತಾಂಜಲಿ | ೧. ಓಂಪ್ರಥಮ | ಮಾಧುಮಾಧವಿ | ರೂಪಕ |
| ೨. ಶಿವದಾಸ ಗೀತಾಂಜಲಿ | ೨. ಓಂಪ್ರಥಮಜ್ಞಾನ | ಶಾಂತಮಲಹರಿ | ಝುಂಪೆ |
| ೩. ಶಿವದಾಸ ಗೀತಾಂಜಲಿ | ೪. ಗುರುಕರಣ | ಮಲಹರಿ | ಆಟತಾಳ |
| ೪. ಶಿವದಾಸ ಗೀತಾಂಜಲಿ | ೫. ಲಿಂಗಾಧರಣ | ದೇಶಿ | ಆಟತಾಳ"[೧೮] |

ಪಲ್ಲವಿಯ ಪ್ರಯೋಗ ಸಾಮಾನ್ಯ, ಹೆಚ್ಚಿನ ಕಡೆ ಎರಡು ಸಾಲು ಕಂಡುಬಂದರೆ, ಕೆಲವೆಡೆ ಮೂರು, ನಾಲ್ಕು ಸಾಲುಗಳು ಹಾಗೂ ಅನುಪಲ್ಲವಿ ಅಲ್ಲಲ್ಲಿ ಕಂಡುಬರುತ್ತದೆ.

ಒಳ್ಳೆಯ ಒಂದು ಹಾಡಿ(ಶರಣನ)ನಲ್ಲಿ ಪಲ್ಲವಿ ಪರಿಚಯಿಸುವ ಒಂದು ಭಾವ ಅಥವಾ ವಿಚಾರ ಮುಂಬರುವ ಪ್ರತಿಯೊಂದು ನುಡಿಯಲ್ಲಿ ರೂಪಕ ಅಥವಾ ಪ್ರತಿಮೆಯಾಗಿ ಬೆಳೆದು ನಿಲ್ಲುತ್ತದೆ. ಇಂತಹ ರಚನೆಗಳು ವಿವಿಧ ಭಾವಗಳನ್ನು ಸೂರೆಗೊಳ್ಳಬಲ್ಲವು.

**ಲಿಂಗನಿಷ್ಠೆ**

ಮನಭಾವ ಕರಣದೊಳ      ರಾಗ : |ಮಾಧು ಮಾಧವಿ|
ಹೊರಗೆ ತೆರಹಿಲ್ಲದಿಹ
ಘನಲಿಂಗ ಸಂಗದಿಂ ಸುಖಿಯಾದೆನು ||ಪಲ್ಲವಿ||

ಪರತತ್ವ ಲಿಂಗ ಕೈಸಾರಲಾ ಲಿಂಗದೊಳು
ತೆರಹಿಲ್ಲದಿಹ ಭಾವದೃಷ್ಟಿ ನಟ್ಟು
ಹರುಷ ಹರವರಿದು, ಮನವೆರಸಿ, ಪುಳಕಂಗಳೊಗೆದು
ಕರಗಿ ಸುರಿವಶ್ರುಜಲ ಮೇರೆದಪ್ಪಿ

ಲಿಂಗಭಾವವೇ ಭಾವ, ಲಿಂಗಪ್ರಾಣವೇ ಪ್ರಾಣ

ಲಿಂಗದಂಗದೊಳಂಗ ಬೇರಿಲ್ಲದೆ

ಲಿಂಗಸಂಗವೆ ಸಂಗ, ಸ್ವಯವಾಗಿ: ಕೂಡಲ

ಸಂಗ, ನಿಮ್ಮೊಳು ಕೂಡಿಸುಖಿಯಾದೆನು (ಶಿ.ಗೀ. ಪು. ೧೫೨)

ವೀರಶೈವ ಧರ್ಮದ ಇಷ್ಟಲಿಂಗ ಮಹತ್ವದ ಈ ಹಾಡಿನಲ್ಲಿ ಪಲ್ಲವಿಯಿಂದೊಡಗೂಡಿ ಪರಸ್ಪರ ಸಂಬಂಧವುಳ್ಳ ರೂಪಕ ಅಥವಾ ಪ್ರತಿಮೆಯು ಕಂಡುಬರುತ್ತದೆ. ಇಂತಹ ಮತಸಂಬಂಧಿ ತಾರ್ಕಿಕ ವಿವರಗಳನ್ನು ಸಂಗೀತ ಸಂಬಂಧಿ ಹಾಡುಗಳಲ್ಲಿ ಹೇಳಿದಂತೆ ವಚನಗಳಲ್ಲಿ ಹೇಳಲು ಸಾಧ್ಯವಿಲ್ಲ.

**೨. ನೂರೊಂದು ವಿರಕ್ತ ಯುಗದ ಹಾಡುಗಳು**

ನೂರೊಂದು ವಿರಕ್ತರ ಯುಗದ ಸ್ವರವಚನ ಸಾಹಿತ್ಯವು ಬಸವೋತ್ತರ ಯುಗದ ಹಾಡುಗಳ ಸಾಹಿತ್ಯ ಚರಿತ್ರೆಯಲ್ಲಿ ಎರಡನೇ ಘಟ್ಟವಾಗಿದೆ. ಪರಂಪರೆ ಹಾಗೂ ಸತ್ವಗಳ ದೃಷ್ಟಿಯಿಂದ ಗಮನಾರ್ಹವಾಗಿರುವ ಈ ಯುಗದಲ್ಲಿ ಹಾಡುಗಳ/ಗೀತೆಗಳ ಸಾಹಿತ್ಯವು

೧. ಸ್ವತಂತ್ರ ರಚನೆ ಸಾಹಿತ್ಯ

೨. ಸಂಯೋಜನ ಸಾಹಿತ್ಯವೆಂದು ಎರಡು ತೆರನಾಗಿದೆ.

ಕರಸ್ಥಲನಾಗಿದೇವ, ಗುರುಬಸವ, ಗುರುಪುರದ ಮಲ್ಲಯ್ಯ, ನಿರ್ವಾಣಿ ಬೋಳೇಶ, ಬತ್ತಲೇಶ್ವರ, ವೀರಣ್ಣದೇವೊಗ್ಗೆಯ ಮಾಯಿದೇವ, ಕವಿಲಿಂಗ, ಕಾರುಗಹಳ್ಳಿ ಶಾಂತಯ್ಯ, ಕೊಡೇಕಲ್ಲು ಬಸವಣ್ಣ ಮೊದಲಾದ ಅನುಭಾವಿಗಳು ಈ ಯುಗದಲ್ಲಿ ಸ್ವತಂತ್ರವಾಗಿ ಗೀತೆಗಳನ್ನು ರಚಿಸಿದ್ದಾರೆ.

ಮಹಾಲಿಂಗದೇವ, ಜಕ್ಕಣಾರ್ಯ, ಸಿದ್ಧಲಿಂಗರ ಏಕೋತ್ತರ ಶತಸ್ಥಲಗಳು, ಶಿವಗಣ ಪ್ರಸಾದಿ ಮಹಾದೇವಯ್ಯ, ಹಲಗೆಯಾರ್ಯ, ಗುಮ್ಮಳಾಪುರದ ಸಿದ್ಧಲಿಂಗ ಶೂನ್ಯಸಂಪಾದನೆಗಳು. ಶಿವಯೋಗ ಪ್ರದೀಪಿಕೆ ಮೊದಲಾದ ಹಾಡುಗಳ ಸಂಕಲನ ಕೃತಿಗಳು ಸ್ವರವಚನ ಸಂಯೋಜನ ಸಾಹಿತ್ಯವನ್ನು ಪ್ರತಿನಿಧಿಸುತ್ತವೆ.

ವಚನಗಳಿಗಿಂತ 'ಹಾಡಿನ' ಮೂಲಕ ಹೇಳುವ ವಿಚಾರವು ಜನಮನವನ್ನು ತೀವ್ರವಾಗಿ, ಪರಿಣಾಮಕಾರಿಯಾಗಿ ಮುಟ್ಟುತ್ತದೆ ಎಂಬುದನ್ನು ಮನಗಂಡ ಈ ಯುಗದ ಅನುಭಾವಿಗಳು. ಧರ್ಮಭೋದೆ, ನೀತಿಭೋದೆ, ತತ್ವ ನಿರೂಪಣೆಗಳನ್ನು ಜನರಲ್ಲಿ ತಿಳಿಯಪಡಿಸಲು ಹಾಡುಗಳನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡರು. ತಾವು ಹಾಡುವುದರ ಜೊತೆಗೆ ಇತರರು ಹಾಡಲೂ ಅನವರಿತು ಅವುಗಳಿಗೆ ರಾಗ-ತಾಳಗಳ ನಿರ್ದೇಶನವನ್ನು ಮಾಡಿದರು. ಈ ಯುಗದ ಹಾಡುಗಳ ಸಾಹಿತ್ಯ ಸಮಗ್ರವಾಗಿ ಸಿಗುವುದಿಲ್ಲ. ಅಲ್ಲಲ್ಲಿ ಚದುರಿಹೋಗಿರುವ ಈ ಯುಗದ ಸಾಹಿತ್ಯವನ್ನು ಒಂದೆಡೆ ಸೇರಿಸಿದಲ್ಲಿ ಹೀಗಿರುವ ಮಾಹಿತಿಗಿಂತ ಈ ಯುಗದ ಹಾಡುಗಳ ಸಾಹಿತ್ಯ ಸ್ವರೂಪ, ವೈಶಿಷ್ಟ್ಯ, ಸತ್ವ, ಶ್ರೀಮಂತಿಕೆಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ.

ಈ ಯುಗದ ಹಾಡುಗಳಲ್ಲಿ ಆರಂಭದಲ್ಲಿ ಶುದ್ಧ ಕಾಂಬೋಧಿ, ಬಿಲ್ಹರಿ ಧನ್ಯಾಸಿ, ಭೈರವಿ, ದೇಶಿ, ಸೌರಾಷ್ಟ್ರ, ಶಂಕರಾಭರಣ ಮೊದಲಾದ ರಾಗಗಳನ್ನು, ಅಟ್ಟ, ತ್ರಿವಿಡೆ ಮುಂತಾದ ತಾಳಗಳನ್ನು ನಿರ್ದೇಶಿಸಲಾಗಿದೆ. ಛಂದಸ್ಸಿನ ದೃಷ್ಟಿಯಿಂದಲೂ ಹೇಳುವುದಾದರೆ ಇವು ಹೆಚ್ಚಾಗಿ ಷಟ್ಪದಿ, ರಗಳೆ, ಕಂದ ಮೊದಲಾದ ಮಾತ್ರಾ ಛಂದಸ್ಸು; ಅಕ್ಕರ, ಚೌಪದಿ, ಪಳೆ ಮುಂತಾದ ಅಂಶ ಛಂದಸ್ಸು; ಅಕ್ಷರ ವೃತ್ತಗಳಲ್ಲಿಯೂ ರಚಿತವಾಗಿರುತ್ತವೆ.

ಈ ಸಮಯದ ಹಾಡುಗಳು ಕಣಿ, ಚಂದಮಾಮ, ಕೊರವಂಜಿ, ಕೋಲಾಟಪದ, ಆರತಿಪದ ಮೊದಲಾದ ಶುದ್ಧ ಜಾನಪದ ಸಾಹಿತ್ಯ ಪ್ರಕಾರಗಳೆನಿಸಿವೆ.

ಉದಾ: ಚಂದಮಾಮನ ಹಾಡು:

ಮುಂದ ಮುಂದಕೆ ಹೋಗಿ
ಮುಕ್ತನಾದುದೊಂದು ಚಂದಮಾಮ
ಅಂಧಕ ನಯನ ತೆರೆದು
ನೋಡುವದೊಂದು ಚಂದಮಾಮ ||ಪಲ್ಲವಿ||

ಐದು ಬಣ್ಣದ ಪಕ್ಷಿ ಮೈದೊಳೆವುದು| ಒಂದು ಚಂದಮಾಮ
ನೆಯ್ದಿಲು ಕುಮುದವು ನೆರವಾದುದು| ಒಂದು ಚಂದಮಾಮ
ಹೊಯ್ದಿಲೆ ಚಿಗಿತು ಹೊಸತಾದುದು| ಒಂದು ಚಂದಮಾಮ
ಐದೆಲೆ ನೂರೊಂದು ತಲೆಯಾದುದು| ಒಂದು ಚಂದಮಾಮ (ಬತ್ತಲೀಶ್ವರ)

(ಶಿ.ಗೀ.ಪು.೩೦೮)

ಇಂತಹ ಅನೇಕ ಜಾನಪದೀಯ ಗೀತೆಗಳು ಮುಂದಿನ ಅನುಭಾವಿಗಳಿಗೆ ಸಾಕಷ್ಟು ಪ್ರಮಾಣದಲ್ಲಿ ಸತ್ವಯುತವಾಗಿ ಬಳಸಿಕೊಳ್ಳಲು ಪ್ರೇರಣೆ ನೀಡಿದವು. ಇದರಿಂದ ಜನಸಾಮಾನ್ಯರು ಹಾಗೂ ಜನಸಾಮಾನ್ಯರ ಪ್ರತಿನಿಧಿಗಳಾದ ಅನುಭಾವಿ, ಶಿವಯೋಗಿಗಳು ಸಾಹಿತ್ಯ ಕ್ಷೇತ್ರ ಪ್ರವೇಶಿಸಿದರು.

ಈ ಯುಗದ ಹಾಡುಗಳ ಸಾಹಿತ್ಯದಲ್ಲಿ ಸಾಮಾಜಿಕ ವಿಚಾರಗಳಿಗಿಂತ ತತ್ತ್ವ, ಲೋಕ ನೀತಿ ಮೊದಲಾದ ವಿಷಯಗಳೇ ಪ್ರಮುಖವಾಗಿರುತ್ತವೆ. ಉದಾ:

ಗುರುವಿಂದಲುದಿಸಿ ಗುರುವಿನ ನಿಜವರಿಯದ
ನರನಿಗೆ ಶಿವಪದವೆಲ್ಲಿಯದೊ ||ಪಲ್ಲವಿ||

ಕೋಹಮೆಂದು ಬಂದೆರಗಿದ ಶಿಷ್ಯಗೆ
ಸೋಹಮೆಂಬ ನಿಜವನರುಹಿದ ಗುರು
ಸಹಜಾನುಗ್ರಹ ಸ್ವಾಯತ ಸಂಬಂಧವ ಮಾಳ್ಪ
ದೀ ಹದನರಿಯದನುಗ್ರಹ ಸಲ್ಲ (ಶಿ.ಗೀ. ಪು.೧೭೭)

ಹೀಗೆ ಈ ಯುಗದ ಹಾಡುಗಳಲ್ಲಿ ಸಾಹಿತ್ಯ ಗುಣಕಡಿಮೆ. ಆದರೂ ಕೆಲವು ಸಾಹಿತ್ಯ ಗುಣದಿಂದ ಶೋಭಿಸುತ್ತವೆ. ಕೆಲ ಹಾಡುಗಳು ತಾತ್ವಿಕ ಧೋರಣೆಯಿಂದ ಸಂಕೀರ್ಣ ಎನಿಸಿದರೂ ಅವು ಅಭಿವ್ಯಕ್ತಿಯ ದೃಷ್ಟಿಯಿಂದ ಶುದ್ಧ ದೇಶಿಯಾಗಿವೆ. ಅನುಭಾವ, ತತ್ವ, ಯೋಗ ಮುಂತಾದ ಗಹನ ಗಂಭೀರ ವಿಷಯಗಳನ್ನು ಈ ಅನುಭಾವಿಗಳು ಪರಿಚಿತ ಪ್ರಾಣಿ, ಪಕ್ಷಿ, ವ್ಯಕ್ತಿ, ವಸ್ತು, ಪ್ರಕೃತಿ ಮೊದಲಾದ ಸಂಕೇತ ಹಾಗೂ ರೂಪಕಗಳ ಮೂಲಕ ಸುಲಭಗ್ರಾಹ್ಯವಾಗುವಂತೆ ವಿವರಿಸಿದ್ದಾರೆ. ಒಟ್ಟಿನಲ್ಲಿ ನೂರೊಂದು ವಿರಕ್ತರು ಸೃಷ್ಟಿಸಿದ ಸಾಹಿತ್ಯವು ಸಾಮಾಜೋದ್ಧಾರಕ್ಕಿಂತ ಆತ್ಮೋದ್ಧಾರವನ್ನು ಪ್ರತಿಪಾದಿಸುವ ಸಾಹಿತ್ಯವಾಗಿದೆ ಎಂದ್ಹೇಳಬಹುದು. ಭಕ್ತಿ-ಜ್ಞಾನ-ವೈರಾಗ್ಯ-ಯೋಗ ಪರವಾದ ಈ ಸಾಹಿತ್ಯಕ್ಕೆ ರಾಗ-ತಾಳಗಳ ಮೂಲಕ ಸಂಗೀತವನ್ನು ಸಂಯೋಜಿಸಿ ಸ್ವರವಚನಗಳು ಜನಪರವಾಗುವಂತೆ ನೋಡಿಕೊಂಡದ್ದು ಈ ಯುಗದ ವೈಶಿಷ್ಟವೆನಿಸಿದೆ.

**ತೋಂಟದ ಸಿದ್ಧಲಿಂಗ ಯುಗದ ಸ್ವರವಚನ ಸಾಹಿತ್ಯ**

ವೀರಶೈವ ಧಾರ್ಮಿಕ ಇತಿಹಾಸದ ಮೂರನೇ ಘಟ್ಟದಲ್ಲಿ ಬಂದ ತೋಂಟದ ಸಿದ್ಧಲಿಂಗಯತಿ ಶ್ರೇಷ್ಠ ಅನುಭಾವಿಗಳು. ನೂರೊಂದು ವಿರಕ್ತರು ಆಗಿ ಹೋದ ಬಳಿಕ ಹಾಗೂ ರಾಜಕೀಯವಾಗಿ ವಿಜಯನಗರ ಸಾಮ್ರಾಜ್ಯದ ಅವನತಿಯ ಕಾರಣವಾಗಿ ಮಧ್ಯಕಾಲೀನ ವೀರಶೈವ ಸಮಾಜದಲ್ಲಿ ಒಂದು ರೀತಿಯ ಗೊಂದಲ ತಳಮಳಗಳಿಂದಾಗಿ ಶೂನ್ಯ ಆವರಿಸಿತ್ತು. ಇಂಥ ಸನ್ನಿವೇಶದಲ್ಲಿ ಇವರು ಜನ್ಮ ತಳೆದರು ಎನ್ನಬಹುದು.

ಕವಿಚರಿತ್ರಕಾರರ ಊಹೆಯ ಆಧಾರದ ಮೇಲಿಂದ ಇವರ ಕಾಲ ಸು.೧೫೦೦ ಇರಬಹುದು. ಕಲಬುರ್ಗಿಯವರ ವಾದದ ಪ್ರಕಾರ: ಬಿಜ್ಜಾವರದ ಅರಸನನ್ನು ಆಧಾರವಾಗಿಟ್ಟುಕೊಂಡು ರಚಿತವದ ಇಮ್ಮಡಿ ಭೂಪಾಲನ ಸಾಂಗತ್ಯದಲ್ಲಿ ಈ ರಾಜನು ತೋಂಟದ ಸಿದ್ಧಲಿಂಗೇಶ್ವರ ಪ್ರಸಾದದಿಂದ ಜನಿಸಿದವನೆಂದು ಇದೆ. ಈತನ ಮಗ ಚಿಕ್ಕಭೂಪಾಲನ ಆಸ್ಥಾನದಲ್ಲಿ ರಚಿತವಾದ ಕೃತಿಗಳಲ್ಲಿ ಒಂದಾದ ಅಮೃತೇಶ್ವರ ಭಾಷ್ಯದ ಕಟ್ಟಿನಲ್ಲಿ ಅದರ ಕಾಲಸೂಚನೆಯಿದ್ದು ಅದು ಕ್ರಿ.ಶ.೧೫೬೩ಕ್ಕೆ ಸರಿಹೊಂದುವುದರಿಂದ ಇವರ ಕಾಲ ೧೫೦೦ ಆಗಿರಬಹುದು. ಪ್ರಸ್ತುತದಲ್ಲಿ ೧೫೦೦ ರಿಂದ ೧೬೦೦ರ ವರೆಗಿನ ರಚಿತವಾದ ಸ್ವರವಚನಗಳು ಈ ಕಕ್ಷೆಯಲ್ಲಿ ಒಳಪಟ್ಟಿವೆ. ಈ ಅವಧಿಯಲ್ಲಿ ಇಂತಿಷ್ಟೆ ಸ್ವರವಚನಕಾರರು ಕಂಡು ಬಂದಿದ್ದಾರೆಂದು ಹೇಳಲಾಗದು. ಆದರೂ ಕೆಲವರನ್ನು ಗುರುತಿಸಬಹುದು. ಕವಿಲಿಂಗ, ಜಿಗುನಿಮರುಳುದೇವ, ಕಂಬಾಳದ ಶಾಂತಮಲ್ಲೇಶ, ಸಿದ್ಧಲಿಂಗ, ಗಂಗೇಶ, ಶಂಕರದೇವ, ನಿಜಗುಣಶಿವಯೋಗಿ, ಮುಪ್ಪಿನಷಡಕ್ಷರಿ, ಕಾರುಗಹಳ್ಳಿ ಶಾಂತಯ್ಯ ಮುಂತಾದವರು.

ತೋಂಟದ ಸಿದ್ಧಲಿಂಗ ಯುಗದ ಸ್ವರವಚನಗಳ ವಸ್ತು ಅಷ್ಟಾವರಣ, ಷಟ್ಸ್ಥಲ, ಲೋಕ ನೀತಿ, ಭಕ್ತಿ, ಶಿವಪಾರಮ್ಯ ಎಂದು ಸ್ಥೂಲವಾಗಿ ವಿವರಿಸಬಹುದು. ಆದರೂ ಭಿನ್ನತೆಗಳು ಇವರ ಹಾಡುಗಳಲ್ಲಿ ಗೋಚರಿಸುತ್ತವೆ. ತೋಂಟದ ಸಿದ್ಧಲಿಂಗಯತಿಯ ವ್ಯಕ್ತಿತ್ವ ಅನೇಕ ಸ್ವರವಚನಕಾರರಾಗಿ ಸ್ಫೂರ್ತಿಯ ಸೆಲೆಯಾಗಿರುವುದು ಕಂಡುಬರುತ್ತದೆ. ಅನೇಕ ಶರಣರು ಸಿದ್ಧಲಿಂಗಯತಿಯನ್ನೇ ವಸ್ತುವಾಗಿಟ್ಟುಕೊಂಡು ಹಾಡುಗಳನ್ನು ರಚಿಸಿದ್ದಾರೆ. ಬಸವಣ್ಣನನ್ನು ಹೊರತು ಪಡಿಸಿದರೆ ಸಿದ್ಧಲಿಂಗಯತಿಗಳ ಬಗ್ಗೆಯೇ ಇಷ್ಟೊಂದು ಹಾಡುಗಳು ಲಭ್ಯವೆನ್ನಬಹುದು. ಇವರ ನಂತರದಲ್ಲಂತೂ ಇವರನ್ನು ಕೇಂದ್ರವಾಗಿಟ್ಟುಕೊಂಡು ಅನೇಕ ಕೋಲಾಟ, ಸುತ್ತಿರೂಪದ ಹಾಡುಗಳು,

ಮಂಗಳಾರತಿ ಹಾಡುಗಳ ಮಹಾಪೂರವನ್ನೇ ಕಾಣಬಹುದಾಗಿದೆ. ಉದಾಹರಣೆಗೆ ಸಿದ್ಧಲಿಂಗಯತಿಗಳ ಶಿಷ್ಯರಾದ ಜಿಗುವಿ ಮರುಳದೇವರು ರಚಿಸಿದ ಈ ಹಾಡು ಅವರ ಭವ್ಯ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿದೆ.

" ಯೋಗಿಬಂದ ಕಾಣೆಯೆಮ್ಮ ರಾಗ ವಿ
ರಾಗ ವಿದೂರ ಜಂಗಮಲಿಂಗ ಬಂದ ಕಾಣೆ
ಸುರುಚಿರ ಬ್ರಹ್ಮಾಂಡಗಳೆಯಕಟ ಬಂ
ಧುರ ದಿವ್ಯದೇಹದೊಳ ಖಿಳಲೋಕ
ಆದರೆ ಗಗನವಾನನ ದಿಕ್ಕುಗಳೆ ತೋಳ
ವರ ಚಂದ್ರಸೂರ್ಯರೆಸೇವಕಂಗಳ ಚೆಲ್ವಯೋಗಿ"[೫]

ಅಲ್ಲದೆ ಈ ಯುಗದಲ್ಲಿ ರಚಿತವಾದ ಹಾಡುಗಳಲ್ಲಿ ದಾಸರ ಅನುಕರಣೆಯೂ ಕಂಡುಬರುತ್ತದೆ. 'ಯೋಗಿ ಬಂದ ಕಾಣೆಯೆಮ್ಮ ರಾಗವಿ' ಎಂದು ಆರಂಭವಾಗುವ ಗೀತೆಯು ದೇವ ಬಂದ ನಮ್ಮ ಸ್ವಾಮಿ ಬಂದ ಎಂಬ ಪುರಂದರದಾಸರ ಕೀರ್ತನೆಯನ್ನು ನೆನಪಿಗೆ ತರುತ್ತದೆ.

ವೀರಶೈವ ಸಿದ್ಧಾಂತ ಅದರಲ್ಲಿಯೂ ಮುಖ್ಯವಾಗಿ ಷಟ್ಸ್ಥಲಗಳ ಪ್ರತಿಪಾದನೆಗೆ ಸಿದ್ಧಲಿಂಗರು ತಮ್ಮ ಹಾಡುಗಳಲ್ಲಿ ಆದ್ಯತೆ ನೀಡಿದರು. ಇವರ ಪ್ರಭಾವ ಉಳಿದ ಶರಣರ ಮೇಲೆ ದಟ್ಟವಾಗಿರುವುದು ಅವರ ಗೀತೆಗಳನ್ನು ನೋಡುವುದರ ಮೂಲಕ ತಿಳಿದುಬರುತ್ತದೆ. ಹಾಗೆಯೇ ವೀರಶೈವರಲ್ಲಿ ಜಂಗಮನನ್ನು ಲಿಂಗಕ್ಕಿಂತ ಅಧಿಕವೆಂದು ಪರಿಗಣಿಸುವರು. ಶಿವನೇ ಸದ್ಭಕ್ತ, ಸದ್ಭಕ್ತನೆ ಶಿವ ಇವರಿಬ್ಬರ ಅವಿರಳ ಕೂಟವೆ ಮಹಾಜಂಗಮ ಎಂಬುದನ್ನು ನಿರೂಪಿಸುವ ಜಿಗುವಿ ಮರುಳದೇವರು "ಜಂಗಮವೆ ಲಿಂಗಕಧಿಕವೆಂದರ್ಚಿಸುವನಾವನವನೆ ಸರ್ವಕ್ಕಧಿಕಂ" ಹೀಗೆ ಜಂಗಮ ಜಗತ್ತಿನ ಶ್ರೇಷ್ಠ ವಸ್ತುಗಳ ಒಂದು ಪಟ್ಟಿಯೇ ದೊರೆಯುತ್ತದೆ. ಹಾಗೆಯೇ ಗುರುವಿನ ಮಹಿಮೆ, ಘೋರ ಸಂಸಾರದ ಕೋಟಲೆಗಳಿಂದ ಮಾಯಾ ಮೋಹಗಳಿಂದ ಬಿಡುಗಡೆ, ಲಿಂಗಾಂಗ ಸಾಮರಸ್ಯ, ಸೂರ್ಯೋದಯದ ವರ್ಣನೆ, ಚಂದ್ರೋದಯದ ವರ್ಣನೆಯಂತಹ. ಅನೇಕ ವಿಷಯಗಳು ಸ್ವರವಚನಗಳ ವಸ್ತುಗಳಾಗಿವೆ. ನಿಜಗುಣಶಿವಯೋಗಿಯಂತಹ ಶರಣರಲ್ಲಿ ಸೂರ್ಯೋದಯದ ವರ್ಣನೆ, ಚಂದ್ರೋದಯದ ವರ್ಣನೆಗಳು ಆಧ್ಯಾತ್ಮದ ನಿರೂಪಣೆಗೆ ಪೂರಕವಾಗಿ ಬಂದಿರುವುದನ್ನು ಅವರ ಹಾಡಿನಲ್ಲಿ ಗಮನಿಸಬಹುದು.

"ಕವಿದು ಸುಜ್ಞಾನ ಬಾಸ್ಕರ ನೊಲಿದು ಮೂಡುತಿರೆ
ಭವತಿಮಿರವಿರಲಮ್ಮದೋಡುತಿದೆ ದೆಸೆಗಟ್ಟು
ಶಿವಮಂತ್ರ ಜಪವೆಂಬ ವಿಹಗತತಿ ನಲಿವುತಿದೆ ತವೆಬಾಡಿ ದುರಿತ ಕುಮುದ
ಅವಿರಳಾನಂದ ಸಾರಸ ನೋಡಿ ನಗುತಲವೆ
ನಮ್ಮ ಭಕ್ತೀಂಭ್ರಮರ ನಲಿದಾಡುತಿವೆ ಸ್ವರಗೂಡಿ
ಭವನ ಭೀತಿಯೆನಿಪ್ಪ ಜೊನ್ನವಕ್ಕಿಗೆ ದುಃಖಮೂಡೆ ಚಿತ್ಸೂರ್ಯನೊಸೆದ ಶಿವನೆ"[೬೦]

ಎಂಬ ಸಾಲುಗಳನ್ನು ನೋಡಬಹುದು.

ವೀರಶೈವ ಸಾಹಿತ್ಯ ಹಾಗೂ ದಾಸಸಾಹಿತ್ಯದ ನಡುವೆ ಕೊಳುಕೊಡುಗೆಗಳು ನಡೆದಿರುವುದಕ್ಕೆ ಅನೇಕ ನಿದರ್ಶನಗಳುಂಟು. ಅದರಂತೆ ಕೀರ್ತನೆಗಳಲ್ಲಿ ಕಂಡುಬರುವ ಸಂಗತಿಗಳಿಗೆ ಪ್ರತಿಕ್ರಿಯೆ ಎಂಬಂತೆ ಅನೇಕ ಸ್ವರವಚನಗಳು ಕಾಣಿಸಿಕೊಳ್ಳುವುದುಂಟು. ಹರಿದಾಸರು ಹರಿಯ ಬಾಯಲ್ಲಿ ವಿಶ್ವರೂಪದರ್ಶನ ಮೂಡಿಸಿರುವುದಕ್ಕೆ ನಿದರ್ಶನವೆಂಬಂತೆ ಮರುಳದೇವರು ಶರಣರ ಬಾಯಲ್ಲಿ ಬ್ರಹ್ಮಾಂಡವೇ ಅಡಗಿದೆ ಎಂದಿದ್ದಾರೆ. ಇವರು ಕೋಗಿಲೆಯನ್ನು ಪ್ರತಿಮೆಯಾಗಿಟ್ಟುಕೊಂಡು ಜೀವಾತ್ಮ ಮತ್ತು ಪರಮಾತ್ಮನ ಸಂಬಂಧವನ್ನು ವಿವರಿಸುವ ರೀತಿ ಸೊಗಸಾಗಿದೆ. ಪ್ರಾಯಶಃ ಈ ಒಂದು ಸ್ವರವಚನದ ಪ್ರಭಾವದಿಂದಲೋ ಎಂಬಂತೆ ಇವರ ಶಿಷ್ಯರಾದ ನಿಜಗುಣರು 'ಕೋಗಿಲೆ ಚೆಲ್ವ ಕೋಗಿಲೆ ಮುದ್ದು ಕೋಗಿಲೆ ಜಾಣಕೋಗಿಲೆ" ಎಂಬ ಪ್ರಸಿದ್ಧ ಹಾಡನ್ನು ರಚಿಸಿರಬೇಕು. ಇವರ ಪರಂಪರೆ ಮುಂದೆ ಹೊನ್ನರ ಗಂಗೇಶ, ಶಂಕರದೇವ. ನಿಜಗುಣಶಿವಯೋಗಿಗಳಲ್ಲಿ ಮುಂದುವರೆದಿದೆ. ನಿಜಗುಣ ಶಿವಯೋಗಿಗಳು ಅನುಭವಸಾರ. ಪರಮಾರ್ಥಗೀತೆ, ಪರಮಾನುಭವ ಬೋಧೆ, ಪರಮಾರ್ಥ ಪ್ರಕಾಶಿಕೆ, ವಿವೇಕ ಚಿಂತಾಮಣಿ ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಈ ಗ್ರಂಥಗಳ ಸಾರ ಸಂಗ್ರಹ ಕೈವಲ್ಯ ಪದ್ಧತಿ. ಈ ಕೃತಿಗೆ ಸ್ವರಪದಗಳ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವಿದೆ. ಇದರ ಪೂರ್ವದಲ್ಲಿ ಹಾಡುಗಳಿದ್ದರೂ ಕೈವಲ್ಯ ಎಂಬ ಸಂಪ್ರದಾಯ ಕಾಣಿಸಿಕೊಂಡದ್ದು ನಿಜಗುಣರ ಕೃತಿಯಿಂದಲೇ. ಇದರಲ್ಲಿ ಶಂಭುಲಿಂಗ ಅಂಕಿತದಲ್ಲಿ ೧೭೪ ಹಾಡುಗಳಿವೆ. ಇವು ಶಿವಕಾರುಣ್ಯ ಸ್ಥಲ, ಜೀವ ಸಂಬೋಧನ ಸ್ಥಲ, ನೀತಿ ಕ್ರಿಯಾಚಾರ ಸ್ಥಲ, ಯೋಗ ಪ್ರತಿಪಾದನ ಸ್ಥಲ, ಜ್ಞಾನ ಪ್ರತಿಪಾದನಸ್ಥಲ ಎಂಬ ಐದು ಸ್ಥಲಗಳ ಚೌಕಟ್ಟಿಗೆ ಒಳಪಟ್ಟಿವೆ.

ಒಟ್ಟಿನಲ್ಲಿ ಇವರ ಹಾಡುಗಳು ಕೇಳುಗರ ಹೃದಯಕ್ಕೆ ಅಪ್ಯಾಯಮಾನವಾಗುವಂತಹವು. ಮುಂದಿನ ಪೀಳಿಗೆಯ ಮೇಲೆ ಅಗಾಧ ಪರಿಣಾಮ ಬೀರಿದವು. ಕಡಕೋಳ ಮಡಿವಾಳಪ್ಪ, ಸರ್ಪಭೂಷಣಶಿವಯೋಗಿ ಮೊದಲಾದವರು ಸ್ವರಪದಗಳನ್ನು ರಚಿಸಿದರು. ಈ ಯುಗದಲ್ಲಿ ಸಿದ್ಧಲಿಂಗ ಅಂಕಿತದ ಅನೇಕ ಹಾಡುಗಳು ಲಭ್ಯವಾಗಿವೆ. ಇವುಗಳು ದಾಸರ ಕೀರ್ತನೆಗಳಿಂದ ಪ್ರಭಾವಿತವಾಗಿರುವುದು ಕಂಡುಬರುತ್ತದೆ. ಸಿದ್ಧಲಿಂಗ ಯುಗದ ಸ್ವರಪದ ಸಾಹಿತ್ಯಕ್ಕೆ ಸತ್ವವನ್ನು ತಂದುಕೊಟ್ಟ ಮತ್ತೊಬ್ಬ ಅನುಭಾವಿಯೆಂದರೆ ಮುಪ್ಪಿನ ಷಡಕ್ಷರಿಗಳನ್ನು ಇವರು ನಿಜಗುಣರ ಸಮಕಾಲೀನನಾಗಿ ಬದುಕಿದದ್ದು ಸುಮಾರು ೭೪ ಹಾಡುಗಳನ್ನು ಸಾಮಾಜಿಕ ಮುಖಿ ನೆಲೆಯಿಂದ ರಚಿಸಿ ಅಪಾರ ಜನ ಮನ್ನಣೆ ಪಡೆದಿದ್ದಾರೆ. ಉದಾ:

"ಅವರವರ ದರುಶನಕೆ
ಅವರವರ ವೇಷದಲಿ
ಅವರವರ ಭಾವಕ್ಕೆ
ಅವರವರ ಭಕ್ತಿಗೆ
ಅವರವರಿಗೆಲ್ಲ ದೇವ ನೀನೊಬ್ಬನೆ
ಹೋರಾಟ ದಿಕ್ಕಿಸಲು ಬೇರಾದೆಯಲ್ಲದೆ
ಬೇರುಂಟೆ ಜಗದೊಳಗೆ ಎಲೆ ದೇವನೆ"[೫೫]

ಎಂಬ ಉದಾತ್ತ ಭಾವನೆಯ ಹಾಡನ್ನು ಶಿವ ಎಂಬ ಲಕ್ಷ್ಮಣರೇಖೆಯನ್ನು. ಕ್ರಮಿಸಲಾರದ ಶರಣರನ್ನು ದೃಷ್ಟಿಯಲ್ಲಿರಿಸಿಕೊಂಡು ಈ ಹಾಡನ್ನು ಸೃಷ್ಟಿಸಿದರು. ಹೀಗೆ ತೋಂಟದ ಸಿದ್ಧಲಿಂಗಯತಿ ಯುಗದಲ್ಲಿ ಸು.೭೦೦ಕ್ಕೂ ಹೆಚ್ಚು ಸ್ವರಪದಗಳು ಕಂಡುಬರುತ್ತವೆ. ಇದರಲ್ಲಿ ಬಹುಪಾಲು ದಕ್ಷಿಣ ಕರ್ನಾಟಕ ಕವಿಗಳಿಂದ ರಚಿತವಾದ ವಸ್ತು ಮತ್ತು ಸ್ವರೂಪದ ದೃಷ್ಟಿಯಿಂದ ವೈವಿಧ್ಯಮಯವಾದ ಹಾಡುಗಳು ಕಂಡುಬರುತ್ತವೆ. ಷಟ್ಸ್ಥಲ ನಿರೂಪಣೆಯೇ ಇವುಗಳ ಪ್ರಧಾನ ಧ್ಯೇಯವಾಗಿರುವಂತೆ ಸಿದ್ಧಾಂತನಿಷ್ಠವಾಗಿರುವಂತೆ ಕಂಡುಬಂದರೂ ಅದನ್ನು ಮೀರುವ ಪ್ರಯತ್ನವೂ ಅಲ್ಲಲ್ಲಿ ನಡೆದಿದೆ. ಮುಪ್ಪಿನಷಡಕ್ಷರಿ ಮತ್ತು ನಿಜಗುಣಶಿವಯೋಗಿಗಳಂಥವರು ವಸ್ತು ಮತ್ತು ಭಾಷೆಯಲ್ಲಿ ನಾವಿನ್ಯತೆ ತಂದು ಈ ಯುಗ ಬರಡಾಗದಂತೆ ಮಾಡಿದ್ದಾರೆ. ಇವರ ಪ್ರಭಾವ ಮುಂದಿನ ಯುಗಕ್ಕೆ ಸಾಕಷ್ಟು ಪ್ರಮಾಣದಲ್ಲಾಗಿದೆ ಎನ್ನಬಹುದು.

**ತೋಂಟದ ಸಿದ್ಧಲಿಂಗೋತ್ತರ ಕಾಲೀನ ಸ್ವರವಚನ ಸಾಹಿತ್ಯ**

ಬಸವಾದಿ ಪ್ರಮಥರು, ಕರಸ್ಥಲ ನಾಗಿದೇವರು ಮುಖ್ಯವಾದ ನೂರೊಂದು ವಿರಕ್ತರ, ಸಿದ್ಧಲಿಂಗನ ವಚನಾಬ್ಧಿ ಕ್ಷೀರವ ಸವಿದಿದ್ದ ಗಣಗಳು ಸ್ವರಪದಗಳನ್ನು ತಮ್ಮ ಅನುಭವದ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಮಾಡಿಕೊಂಡರು. ಈ ನಿಟ್ಟಿನಲ್ಲಿ ಲೋಕವನ್ನು ತಿದ್ದುವ ಕಾರ್ಯವನ್ನು ನಡೆಸಿದರು. ಇದಕ್ಕೆ ಉತ್ತರವೆಂಬಂತೆ ಕೆಸ್ತೂರದೇವರು ಬರೆದಿರುವ ಈ ಹಾಡು ಶರಣ ಪರಂಪರೆಯ ಸಾಹಿತ್ಯಕ ಮೌಲ್ಯವನ್ನು ದಾಖಲಿಸುವಲ್ಲಿ ಸಮರ್ಥವಾಗಿದೆ.

"ಏತರ ವಚನವಿನ್ನೇತರ ಪದಗೀತ
ನೂತನದಿಂದಾದ ಮಾತಿನ ಗೀತೆಗಳೇ ಬೇರೆ ||ಪಲ್ಲವಿ||

ನಿತ್ಯ ಪವಾಡವ ಮೆರೆದು ಕಲ್ಯಾಣದೊಳ್
ಭಿತ್ತಿ ಯೊಳಿಗ ಚಿತ್ರಗೀತೆಗಳ ನಡೆಸಿ
ಭಕ್ತಿರಸಾಂಬುಧಿರಸ ಬಸವಾರ್ಯ
ಹಾಡಿನ ಷಟ್‌ಸ್ಥಳಕುಳ ವಚನಂಗಳಿರುಲು ಬೇರೆ

ಜ್ಞಾನ ಸಂಪನ್ನದುನ್ನತ ಚೆನ್ನಬಸವಯ್ಯ
ಧ್ಯಾನ ಧಾರಣ ಯೋಗ ಶಿವಸುಖದ
ಸೋನೆಗೆರೆಸಿದನು ಭಾವದೊಚನವಿರೆ
ತಾನನುಭವಿಸದೆ ಬೇರೊಂದುರು ಪಮೆಗಳ್ ಬೇರೆ

ಬಸವನ ಮಠದೊಳು ರಸಭಕ್ಷ್ಯ ಸಾಮಸ
ಹೊಸ ಪರಿಯ ಗಣಿತ ಶಾಕಂಗಳು

ಒಸೆದಂದು ಹಸಿದಿರ್ದ ಚರ ತುಪ್ತಿಪಡಿಸಿ ತಾ
ನೆಸೆದಿಹ ಪ್ರಭುದೇವರೊಚನಂಗಳಿರೆ ಬೇರೆ”[೨೨]

ಎಡೆಯೂರು ಸಿದ್ಧಲಿಂಗರು ವೀರಶೈವ ಧರ್ಮಕ್ಕೆ ಉತ್ಸಾಹ ತುಂಬಿದವರು. ಅವರ ನಂತರದ ಪರಂಪರೆಯಲ್ಲಿ ಬಂದವರು ಕಟ್ಟಿಗೆ ಸಂಗ, ಮುರಿಗೆ ಶಾಂತವೀರ, ೩ನೇ ಮುರಿಗಾಗುರುಸಿದ್ಧ, ಸೋದೆಯ ಸದಾಶಿವರಾಜ, ಮದ್ದೇರಿ ಶಿವಲಿಂಗ, ಚೀಲಾಳಪ್ಪನವರು ಸ್ವರಪದಗಳನ್ನು ಸಮೃದ್ಧವಾಗಿ ರಚಿಸಿದ್ದಾರೆ. ನಿಜಗುಣಶಿವಯೋಗಿ ಮತ್ತು ಮುಪ್ಪಿನಷಡಕ್ಷರಿಗಳ ಪರಂಪರೆಯು ಮೈಸೂರು ಪ್ರದೇಶದಲ್ಲಿ ರೂಪಗೊಂಡಿತೆನ್ನಬಹುದು. ಸೋಮಕಟ್ಟೆ ಕರಿವೃಷಭ ದೇಶಿಕರು ಮತ್ತು ಗುರುಕುಮಾರಸ್ವಾಮಿ ಅಂಕಿತದ ಸ್ವರವಚನಕಾರರು ನಿಜಗುಣಶಿವಯೋಗಿಗಳ ಕೃತಿಗಳನ್ನು ಹೆಸರಿಸಿ ಸ್ತುತಿಸಿದ್ದಾರೆ. ನಿಜಗುಣಶಿವಯೋಗಿಗಳ ಕೈವಲ್ಯ ಪದ್ಧತಿಯು ನೀಡಿದ ಸ್ಫೂರ್ತಿಯಿಂದ ಸರ್ಪಭೂಷಣ ಶಿವಯೋಗಿಗಳ ಕೈವಲ್ಯ ಕಲ್ಪವಲ್ಲರಿ ರಚನೆಗೊಂಡಿತು. ಇವೆರಡರ ಪ್ರೇರಣೆಯಿಂದ ಕೈವಲ್ಯ ಸಾಹಿತ್ಯ ರೂಪಗೊಳ್ಳಲು ಸಾಧ್ಯವಾಯಿತೆನ್ನಬಹುದು.

೧೯ನೇ ಶತಮಾನದಲ್ಲಿ ಉತ್ತರ ಕರ್ನಾಟಕದ ಶರಣರು ಅದರಲ್ಲಿಯೂ ಗುಲ್ಬರ್ಗಾ, ರಾಯಚೂರು, ವಿಜಾಪುರ ಭಾಗದವರು. ಯಥೇಚ್ಛವಾದ ಸ್ವರಪದಗಳ ರಚನೆಯನ್ನು ಕೈಗೊಂಡರು. ಕಡಗೋಳಮಡಿವಾಳಪ್ಪನವರ ಜೊತೆ ಜೊತೆಯಲ್ಲಿ ರಾಮಪುರದ ಬಕ್ಕಪ್ಪ, ಖೈನೂರ ಕೃಷ್ಣಪ್ಪ, ತೆಲುಗು ಬಾಳ ರ್‍ಯಾವಪ್ಪ, ಕೂಡ್ಲೂರ ಬಸವಲಿಂಗಪ್ಪ, ಕಡ್ಲೇವಾಡ ಸಿದ್ದಪ್ಪ, ಗೂಗಲ್ಲ ಪರಪ್ಪಯ್ಯ ನೀರಲಕೇರಿ ಬಸವಲಿಂಗ, ಕೋಲಕುಂದಿ ಚಾಪಣ್ಣ, ಶಾಂತಗಿರಿ ಅಯ್ಯಪ್ಪಯ್ಯ, ಚೆಳ್ಳಗುರ್ಕಿ ತಿಕ್ಕಯ್ಯ, ಸಿರಗೇರಿ ಕಲ್ಮೇಶ, ಕಲ್ಬುರ್ಗಿ ಚೆನ್ನಬಸವೇಶ್ವರ, ಸಲಗರದ ಸಿದ್ರಾಮ, ಜಂಬಗಿ ಶರಣ, ಕೋನಾಪುರದ ರಾಮಪ್ಪ, ಕೋಂಗವಾಡದ ಸಂಗಮೇಶ, ಮುನ್ನೋಳಿ ಶಿವಪುತ್ರ ಮೊದಲಾದವರು ಸ್ವರವಚನಗಳನ್ನು ತತ್ವ ಗೀತೆಗಳನ್ನು ರಚಿಸಿದರು.

ಕಟ್ಟಿಗೆಹಳ್ಳಿ ಸ್ವಾಮಿಗಳು, ಮುರಿಗಾಶಾಂತವೀರರು, ಇಮ್ಮಡಿ ಮುರಿಗಾ ಗುರುಸಿದ್ಧಸ್ವಾಮಿಗಳು, ತಾವು ಹಾಡುಗಳನ್ನು ರಚಿಸಿದುದರ ಜೊತೆಗೆ ಇತರರಿಗೂ ಸ್ಫೂರ್ತಿಯ ಸೆಲೆಯಾದರು. ತೋಂಟದಾರ್ಯ ಸಂಪ್ರದಾಯದ ಕೆಸ್ತೂರದೇವರು ಗುರುಸಿದ್ಧ ಅಂಕಿತದಲ್ಲಿ ೧೧೩ ಹಾಡುಗಳನ್ನು ರಚಿಸಿದ್ದಾರೆ. ಕಡಕೋಳ ಮಡಿವಾಳೇಶ್ವರರು ಗುರುಮಹಾಂತ ಅಂಕಿತದಲ್ಲಿ ಸ್ವರವಚನಗಳನ್ನು ರಚಿಸಿದ್ದಾರೆ. ಸು. ೧೭೫೦ಕ್ಕೂ ಹೆಚ್ಚು ಪದಗಳನ್ನು ರಚಿಸಿರುವುದಾಗಿ ಅವರೇ ಹೇಳಿಕೊಂಡಿದ್ದಾರೆ. ಹೀಗೆ ೧೯ನೇ ಶತಮಾನದಲ್ಲಿ ಪೂರ್ವ ಮತ್ತು ಉತ್ತರದಲ್ಲಿ ಸಾಕಷ್ಟು ಸಂಖ್ಯೆಯ ಅನುಭಾವಿಗಳು ಹಾಡುಗಳನ್ನು ಬರೆದಿದ್ದು. ಕೆಲ ಮಠಮಾನ್ಯಗಳಲ್ಲಿ, ಹಸ್ತಪ್ರತಿ ಕಟ್ಟುಗಳಲ್ಲಿ ಉಳಿದುಕೊಂಡಿವೆ. ಅಲ್ಲಲ್ಲಿ ಬಸವಾದಿ ಶರಣರ ವಚನಗಳ ಅಲ್ಪಸ್ವಲ್ಪ ಬದಲಾವಣೆ ಎಂಬಂತೆಯೂ ಕೆಲವು ಗೀತೆಗಳು ಸ್ವರಪದಗಳಲ್ಲಿ ಕಾಣಸಿಗುತ್ತವೆ. ಕೆಲ ಸ್ವರವಚನಗಳು ಬೆಡಗಿನ ರೂಪವನ್ನು ಪಡೆದು ಬೆಡಗಿನ ವಚನಗಳಾಗಿವೆ. ಹೀಗೆ ೧೨ನೆಯ ಶತಮಾನದಲ್ಲಿ ಬಸವಾದಿ ಶರಣರಿಂದ ಕಿರುದೊರೆಯಾಗಿ ಆರಂಭವಾದ ಈ ಸ್ವರವಚನ ಪರಂಪರೆಯು ಮುಂದೆ ಹರಿಹರ, ರಾಘವಾಂಕರ ಆದಿಯಾಗಿ ನೂರೊಂದು ವಿರಕ್ತರ ಕಾಲದಲ್ಲಿ ಹೆದ್ದೊರೆಯಾಗಿ, ನಿಜಗುಣಶಿವಯೋಗಿ ಯುವರ ಕಾಲಕ್ಕೆ ಮಹಾಪೂರವಾಗಿ ಮುಂದುವರೆದುಕೊಂಡು ಇಂದಿನವರೆಗೂ ಹರಿದು ಬಂದಿದೆ ಎನ್ನಬಹುದು.

**ಕೊನೆ ಟಿಪ್ಪಣಿಗಳು**

೧. ವೀರಣ್ಣ ರಾಜೂರ. ಶಿವಯೋಗ ಪ್ರದೀಪಿಕೆ. ಪ್ರಸ್ತಾವನೆ ಭಾಗ

೨. ಬಸವರಾಜು ಎಲ್., ಶಿವದಾಸ ಗೀತಾಂಜಲಿ. ಪ್ರಸ್ತಾವನೆ ಭಾಗ

೩. ಪರಿಷ್ಕೃತ ಕನ್ನಡ ನಿಘಂಟು, ಪು.೩೮೮೦

೪. ಮಲ್ಲಾಪುರ ಬಿ.ವ್ಹಿ., ಚೆನ್ನಬಸವಣ್ಣನವರ ವಚನ ಸಂಪುಟ, (ವ.೫೦).

೫. ಕಲಬುರ್ಗಿ ಎಂ.ಎಂ., ಬಸವರಾಜ ದೇವರ ರಗಳೆ

೬. ಬಸವರಾಜು ಎಲ್., ಶಿವದಾಸ ಗೀತಾಂಜಲಿ, ಪು.೯೭

೭. ಕಲಬುರ್ಗಿ ಎಂ.ಎಂ., ಬಸವಣ್ಣನವರ ವಚನ ಸಂಪುಟ, ಪು.೪೯೪

೮. ವಿದ್ಯಾಶಂಕರ ಎಸ್., ಸಿದ್ಧರಾಮೇಶ್ವರ ವಚನ ಸಂಪುಟ, ವಚನಸಂಖ್ಯೆ ೧೬೦

೯. ಕಲಬುರ್ಗಿ ಎಂ.ಎಂ., ಬಸವಣ್ಣನವರ ವಚನಸಂಪುಟ, (ವಚನ ೫೦೦).

೧೦. ಕಲಬುರ್ಗಿ ಎಂ.ಎಂ., ಕವಿರಾಜಮಾರ್ಗದ ಕನ್ನಡ ಸಾಹಿತ್ಯ ಪರಿಸರ, ಪು. ೫೪-೬೭

೧೧. ಸರ್ವಮಂಗಳಾ ಶಂಕರ್, ವಚನಕಾರರು ಮತ್ತು ಸಂಗೀತ (ಲೇ), ಭೂಷಣ ಪ್ರ.೧೨೫

೧೨. ಬಸವರಾಜ ಎಲ್., ಶಿವದಾಸ ಗೀತಾಂಜಲಿ, ಪು. ೬೬

೧೩. ಬಸವನಾಳ ಸಿ.ಸಿ. ಕೈವಲ್ಯ ಕಲ್ಪವಲ್ಲರಿ, ಪ್ರಸ್ತಾವನೆ, ಪು.xviii-xx

೧೪. ಚಿದಾನಂದಮೂರ್ತಿ ಎಂ., ವಚನ ಸಾಹಿತ್ಯ, ಪು.೨೪೬

೧೫. ಶಿವಾನಂದ ವಿ., ಪ್ರೌಢದೇವರಾಯರ ಕಾಲದ ಕನ್ನಡ ಸಾಹಿತ್ಯ, ಪು. ೨೨೮

೧೬. ವೀರಣ್ಣರಾಜೂರು, ಶಿವಯೋಗ ಪ್ರದೀಪಿಕೆ

೧೭. ಲಠ್ಠೆ ಎಂ.ಎಸ್., ಸ್ವರವಚನ : ಒಂದು ವಿವೇಚನೆ, ಪ್ರಸ್ತಾವನೆಯ ಭಾಗ

೧೮. ಕಲಬುರ್ಗಿ ಎಂ.ಎಂ., ಸ್ವರವಚನ ವಿಚಾರ ಸಂಕೀರ್ಣ, ಪು.೧೧೬

೧೯. ಭಾನುಮತಿ ವೈ.ಸಿ., ಸ್ವರವಚನ ವಿಚಾರ ಸಂಕಿರಣ (ಲೇ), ಪು.೧೩೩

೨೦. ಅದೇ, ಪು.೧೩೬

೨೧. ಕುರುವ ಬಸವರಾಜ ಸ., ಮುಪ್ಪಿನ ಷಡಕ್ಷರಿ, ಪದ-೧೩

೨೨. ಕಲಬುರ್ಗಿ ಎಂ.ಎಂ., ಸ್ವರ ವಚನ ವಿಚಾರ ಸಂಕಿರಣ, ಪು.೧೪೪

## ಅಧ್ಯಾಯ ೪

# ಶಿವದಾಸರ ಹಾಡುಗಳು : ವಸ್ತು ವಿನ್ಯಾಸ

೧೨ನೇಶತಮಾನದ ಕನ್ನಡ ನಾಡಿನ ಇತಿಹಾಸದಲ್ಲಿ ಸಾಂಸ್ಕೃತಿಕವಾಗಿ ಹೊಸ ಬೆಳಕು ಸೂಚಿಸಿದ ಮಹತ್ವದ ಕಾಲ. ಅಂದು ಬಸವಾದಿ ಪ್ರಮಥರು ಹದಗೆಟ್ಟ ಸಮಾಜವನ್ನು ಸಂಪೂರ್ಣವಾಗಿ ಬದಲಾಯಿಸುವ ದೃಷ್ಟಿಯಿಂದ ಸರ್ವಸಮತೆಯ ಆಧಾರದ ಮೇಲೆ ಹೊಸ ಸಮಾಜ ನಿರ್ಮಾಣ ಮಾಡುವ ದೃಷ್ಟಿಯಿಂದ ನಾಡಿನಲ್ಲಿ ಕ್ರಾಂತಿಯ ಕಹಳೆಯನ್ನೂದಿದರು. ಜನರಲ್ಲಿ ರೂಢಿಯಲ್ಲಿದ್ದ ಕಂದಾಚಾರ, ಅಂಧಶ್ರದ್ಧೆಗಳ ಬದಲಾಗಿ ವೈಚಾರಿಕವು, ವೈಜ್ಞಾನಿಕವು ಸರ್ವಹಿತಕಾರಿಯೂ ಆದ ಆಚಾರ ವಿಚಾರಗಳನ್ನು ಮೂಡಿಸಿದರು. ತಮ್ಮದೇ ಆದ ವಿಶಿಷ್ಟ ವ್ಯಕ್ತಿತ್ವ, ಸರ್ವಸಮತೆಯ ಆದರ್ಶ, ನಡೆನುಡಿಗಳಿಗೆ ಅಂತರವಿಲ್ಲದ ಅವರ ಬದುಕು ಇವುಗಳಿಂದ ಅಂದಿನ ಜನಮನವನ್ನು ಸೆಳೆದರು. ತಮ್ಮಯ ವೈಚಾರಿಕ ದೃಷ್ಟಿಕೋನ ಮತ್ತು ವಿಚಾರಧಾರೆಗಳನ್ನು ಸಾಮಾನ್ಯ ಜನರಿಂದ ಹಿಡಿದು ಎಲ್ಲಾ ವರ್ಗದವರಿಗೆ ಮುಟ್ಟುವಂತೆ ಸಾಮಾನ್ಯ ಆಡುಮಾತಿನ ಗದ್ಯರೂಪ ಲಯದ ಮಾತುಗಳಿಂದ ತಿಳಿಯಪಡಿಸಿದರು. ಅದುವೇ 'ವಚನ' ಎಂಬ ಸಾಹಿತ್ಯ ಪ್ರಕಾರ. ಈ ಪ್ರಕಾರ ಅಂದಿನವರೆಗೆ ಪಂಡಿತಶಾಹಿಯಾಗಿ ಮೆರೆದ ಸಂಸ್ಕೃತ ಸಾಹಿತ್ಯಕ್ಕಿಂತ ಕೇಳುವುದಕ್ಕೂ, ಅಭಿವ್ಯಕ್ತಿಸುವುದಕ್ಕೂ ಸುಲಭವು ಸರ್ವ ಹಿತಕಾರಿಯೂ ಆಯಿತು. ಇದರಿಂದ ಸಾಕಷ್ಟು ತೀವ್ರಗತಿಯಲ್ಲಿ ಬಹುಜನರು ವಚನಕಾರರೆಡೆಗೆ. ವಚನಸಾಹಿತ್ಯದ ಕಡೆಗೆ ಆಕರ್ಷಿತರಾದರು.

ಅಲ್ಲಿಯವರೆಗೂ ಇದ್ದ ಬ್ರಾಹ್ಮಣಶಾಹಿ, ಜೈನಪಂಡಿತವರ್ಗದ ಕಂದಾಚಾರಗಳಿಂದ ಬೇಸತ್ತ ಜನರಿಗೆ ಸುಲಭವು, ಸರ್ವಧರ್ಮಸಹಿಷ್ಣತೆಯ ಧರ್ಮವಾಗಿ ಪ್ರಚಲಿತದಲ್ಲಿ ಬಂದ ವೀರಶೈವ ಧರ್ಮವನ್ನು ಸಮಾಜದ ಶೋಷಿತ ಜನರೆಲ್ಲ ಕಟ್ಟಲು ಮುಂದಾದರು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಅಂದಿನವರೆಗೂ ಇದ್ದು ಇಲ್ಲದಂತೆ ಇದ್ದ ಶೈವ ಮತಕ್ಕೂ ತನ್ನದೇ ಆದ ಅಸ್ತಿತ್ವವು ಬೇಕಾಗಿತ್ತು. ಆದ್ದರಿಂದ ಶೈವ ಮತದಿಂದ ಪ್ರಭಾವಿತರಾದವರೆಲ್ಲ ಒಟ್ಟು ಸೇರಿ ತಮ್ಮದೇ ಆದ 'ವೀರಶೈವ ಧರ್ಮ' ಸ್ಥಾಪಿಸಿ ಅಂದು ಮೆರೆದಾಡುತ್ತಿದ್ದ ಪಂಡಿತ ಧರ್ಮದ ವಿರುದ್ಧ ನಿಂತರು. ಈ ಧರ್ಮವು ಸಮಾಜದ ಜನರೆಲ್ಲ ಸಮಾನರು, ಇಲ್ಲಿ ಯಾರು ಮೇಲಲ್ಲ, ಯಾರು ಕೀಳಲ್ಲ ಎಂಬ ತತ್ವದಡಿ ತಮಗೆ ಅನಿಸಿದ ವಿಚಾರಗಳನ್ನು ಅಭಿವ್ಯಕ್ತಿಸುವ ಸ್ವಾತಂತ್ರ್ಯವನ್ನು ನೀಡಿತು. ಆ ಅಭಿವ್ಯಕ್ತಿಯ ಅನುಭವಗಳೇ ವಚನಗಳಾಗಿ ಪರಿಣಮಿಸಿದವು. ಈ ರೀತಿ ಸಾಗಿ ಬಂದ ವಚನಸಾಹಿತ್ಯ ಎಷ್ಟರಮಟ್ಟಿಗೆ ಜನಸಾಮಾನ್ಯರ ಮೇಲೆ ಪ್ರಭಾವ ಬೀರಿತೆಂದರೆ ಇವುಗಳಿಂದ ತಾವುಗಳು ತಮ್ಮ ಬಾಳನ್ನು ಬೆಳೆಸಿಕೊಂಡು ಅನೇಕರು ವಚನಗಳನ್ನು

ರಚನೆ ಮಾಡುವ ಮಟ್ಟವನ್ನು ಮುಟ್ಟಿದರು. ಹೀಗಾಗಿ ಸೃಜನಶೀಲ ಸಾಹಿತ್ಯ ರಚನೆ ಸಮೃದ್ಧಿಕರವಾಯಿತು. ಇನ್ನೂರಕ್ಕೂ ಹೆಚ್ಚು ಶಿವಶರಣರು, ಮೂವತ್ತಕ್ಕೂ ಹೆಚ್ಚಿನ ಶಿವಶರಣೆಯರು ತಮ್ಮ ತಮ್ಮ ಅನುಭವಗಳ ನೆಲೆಯಲ್ಲಿ ನಿಂತು ತಮ್ಮ ತಮ್ಮ ವೃತ್ತಿಪದಗಳನ್ನು ಬಳಸಿ ವಚನಗಳನ್ನು ಹಾಡಿದರು. ಒಂದೇ ಕಾಲಘಟ್ಟದಲ್ಲಿ ಇಷ್ಟೊಂದು ತೀವ್ರತರದಲ್ಲಿ ಜನ ಸಾಮೂಹಿಕವಾಗಿ ಸಾಹಿತ್ಯ ಕೃಷಿಗೈದ ಹಾಗೂ ಸಾಮಾಜಿಕ ಬದಲಾವಣೆಗೆ ಸಾಧ್ಯವಾದ ನಿದರ್ಶನ ಜಾಗತಿಕ ಇತಿಹಾಸದಲ್ಲಿ ಅತಿವಿರಳವೆಂದೇ ಹೇಳಬಹುದು.

ಸಾಮಾಜಿಕ ಬದಲಾವಣೆಗೆ ಮೂಲಸಾಧನೆಗಳಾದ ವಚನಗಳು ಗೇಯತೆಗೆ ಒಗ್ಗೂವಂತಹವೇ. ಕೆಲ ವಚನಗಳಲ್ಲಿ ಶಿವ ಶರಣರು ತಾವೇ ವಚನಗಳನ್ನು 'ಗೀತೆ'ಗಳೆಂದು ಕರೆದಿದ್ದಾರೆ. ಇದರಿಂದ ಶರಣರು ವಚನಗಳನ್ನು ಹಾಡುತ್ತಲಿದ್ದರು ಅಲ್ಲದೇ ಅವುಗಳಿಗೆ ವಿಶೇಷ ರಾಗ ತಾಳಗಳನ್ನು ಸಮೀಕರಿಸಿ, ಹಾಡುತ್ತಲಿದ್ದರೆಂದು ಬಸವಣ್ಣ, ಅಕ್ಕಮಹಾದೇವಿ, ಅಲ್ಲಮನಂತವರ ವಚನಗಳ ಮೂಲಕ ತಿಳಿಯಬಹುದು. ಇದರ ಜೊತೆಗೆ ಅಂದಿನ ವಚನಕಾರರಿಗೆ ಸಂಪೂರ್ಣ ಅಲ್ಲದಿದ್ದರೂ ಭಾಗಶಃ ಸಂಗೀತ ಜ್ಞಾನವಿದ್ದಿರಲೇ ಬೇಕು. ಒಟ್ಟಾರೆ ಈ ಎಲ್ಲಾ ಅಂಶಗಳನ್ನು ಕ್ರೋಢಿಕರಿಸಿದಾಗ, ಹಾಗೇಯೇ ಕನ್ನಡ ಸಾಹಿತ್ಯದ ವಿವಿಧ ಮಜಲುಗಳನ್ನು ಗಮನಿಸಿದಾಗ ಜನರಿಗೆ ಗದ್ಯಪಾತಕ್ಕಿಂತ ಪದ್ಯಪಾತವು ಹೆಚ್ಚು ಹತ್ತಿರ ಹಾಗೂ ಹೆಚ್ಚು ಮನದಟ್ಟಾಗಲು ಸಾಧ್ಯವಿರುವುದು ಕಂಡುಬರುತ್ತದೆ. ಆದ್ದರಿಂದ ಚಂಪೂ, ಷಟ್ಪದಿ, ಕಂದ, ರಗಳೆಗಳಂತಹ ಪ್ರಕಾರಗಳು ಹುಟ್ಟಿಕೊಂಡು ಅವುಗಳ ಮೂಲಕ ರಾಗಬದ್ಧವಾಗಿ ಕಾವ್ಯ ರಚನೆಯಾಗಿರುವುದು ಕಂಡು ಬರುತ್ತದೆ. ಇಲ್ಲಿ ಗದ್ಯವೆನ್ನುವುದು ಕೇವಲ ಕಥಾ ರೂಪಕ್ಕೆ ಪೂರಕ ಮಾತ್ರ. ಆದ್ದರಿಂದ ಹಿಂದೆಲ್ಲಾ ಕಾವ್ಯ ಪ್ರಕಾರವನ್ನು ಧರ್ಮ ಅಥವಾ ಮತ ಪ್ರಚಾರದ ಹಿನ್ನೆಲೆಯಲ್ಲಿ ದುಡಿಸಿಕೊಂಡರು. ಆದಿ ಪುರಾಣ,ಶಾಂತಿನಾಥ ಪುರಾಣ, ಅಜಿತನಾಥ ಪುರಾಣದಂತಹ ಕಾವ್ಯಗಳು ರೂಪಗೊಂಡಿರುವುದು ಕಾಣ ಸಿಗುತ್ತದೆ. ಹೀಗೆ ಅಂದಿನ ಶರಣರ ಪೂರ್ವದಲ್ಲಿ ರಚಿತವಾಗಿದ್ದ ಕಾವ್ಯಗಳು ಧರ್ಮ ಪ್ರಚಾರಕ್ಕೆಂದು ತಿಳಿದಿದ್ದ ಶರಣರೂ ಸಹ ರಾಗ-ತಾಳಬದ್ದವಾದ ಹಾಡುಗಳನ್ನು ತಮ್ಮ ಧರ್ಮ ಪ್ರಚಾರ ದೃಷ್ಟಿಯಿಂದ ರಚಿಸಿರಬಹುದು.

ಕೇವಲ ವಚನಗಳಿಂದಲೇ ಸಾಕಷ್ಟು ಪ್ರಮಾಣದಲ್ಲಿ ಬದಲಾವಣೆಯನ್ನು ಕಂಡಿದ್ದ ಶರಣರು ಇನ್ನಷ್ಟು ತೀವ್ರ ಗತಿಯಲ್ಲಿ ಸಮಾಜೋಧಾರ್ಮಿಕ ಪ್ರಗತಿಯ ದೃಷ್ಟಿಯಿಂದ ತಮ್ಮ ತಮ್ಮ ಅನುಭಾವ, ತಾತ್ವಿಕ, ಧಾರ್ಮಿಕ ಅಂಶಗಳನ್ನು ವಚನಗಳ ಜೊತೆ ಜೊತೆಗೆ ರಾಗ ಕಟ್ಟಿ ಹಾಡಲಾರಂಭಿಸಿದರು ಅವುಗಳೇ "ಸ್ವರವಚನಗಳು". ಹಾಡು, ಗೀತ, ಸ್ವರಪದ ಹೀಗೆ ಇನ್ನಿತರ ಹೆಸರುಗಳಿಂದ ಕರೆಯಲ್ಪಡುವ ಸ್ವರವಚನಗಳು ವಚನಗಳ ವಸ್ತು-ಆಶಯವನ್ನೇ ಹೊಂದಿವೆ. ಅಲ್ಲದೇ ವಚನಗಳ ಜೊತೆ ಜೊತೆಗೆ ನಡೆದುಕೊಂಡು ಹೊರಟ ವಚನ ಸಾಹಿತ್ಯ ಒಂದು ಹಂತದಲ್ಲಿ ನಿಂತು, ಮತ್ತೊಂದು ಕಾಲದಲ್ಲಿ ಅಲ್ಪಸ್ವಲ್ಪ ಕಾಣುತ್ತಾ ಬಂದರೆ ಈ ಗೀತ ಪ್ರಕಾರವು ವಚನಕಾರರಾದಿಯಾಗಿ ಸಾಗಿ ನೂರೊಂದು ವಿರಕ್ತರು, ತೋಂಟದ ಸಿದ್ದಲಿಂಗಯತಿಗಳ ಆದಿಯಾಗಿ ತನ್ನ ವಸ್ತು ಆಶಯದಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಪಡೆಯುತ್ತಾ ಇಂದಿನವರೆಗೂ ಸಾಗಿ ಬಂದಿದೆ.

ಸ್ವರವಚನವೆಂದರೆ ಹಾಡಲು ಬರುವಂತಹುದು: ಹಾಡಲೆಂದೇ ರಚಿತವಾದವು. ಇವು ತ್ರಿಪದಿ, ಚೌಪದಿ, ಎಳೆ, ಷಟ್ಪದಿ, ಅಷ್ಟಪದಿ ಮೊದಲಾದ ಕಾವ್ಯ ಛಂದಸ್ಸಿನಲ್ಲಿ ಇರುವುದುಂಟು. ಆದರೂ ಈ ಹಾಡುಗಳಲ್ಲಿ ಛಂದಸ್ಸಿನ ನಿಯಮಗಳಿಗಿಂತ ಆಶಯವು ಮುಖ್ಯ. 'ಸ್ವರಪದವೆಂಬುದು ಹಾಡು ಎಂಬುದಕ್ಕೆ ಪರ್ಯಾಯವಾಗಿ ಬಳಕೆಯಾಗಿದೆ. ಇವಕ್ಕೆ ರಾಗ, ತಾಳ ನಿರ್ದೇಶನವು ಇದೆ. ವಚನಗಳು ತಮ್ಮ ಸಾಹಿತ್ಯಗುಣದಿಂದ ಸಹೃದಯರನ್ನು ಆಕರ್ಷಿಸಿದರೆ, ಸ್ವರ ವಚನಗಳು ತಮ್ಮ ಗೇಯ ಗುಣದಿಂದ ಮನಸೆಳೆಯುತ್ತವೆ. ಈ ಗೀತೆಗಳು ಹಾಡಲು ಕಟ್ಟಿದವುಗಳು ಎನ್ನುವುದಕ್ಕಿಂತ ತಾವಾಗಿಯೇ ಹೊರ ಹೊಮ್ಮಿದವುಗಳು ಎನ್ನಬಹುದು. ಸಕಲೇಶ ಮಾದರಸರ ವೀಣೆ, ಬಸವಣ್ಣನ ದಂಡಿಗೆ, ಅಲ್ಲಮ್ಮನ ಮದ್ದಳೆ, ಬ್ರಹ್ಮಯ್ಯ ಹಾಗೂ ಮರುಳಸಿದ್ದರ ಕಿನ್ನರಿ, ಮಾರಯ್ಯನ ಢಕ್ಕೆ, ಬಾಹುರ ಬ್ರಹ್ಮಯ್ಯಗಳ ತಾಳಗಳು ಸ್ವರವಚನಗಳಿಗೆ ಪಕ್ಕ ವಾದ್ಯಗಳಾಗಿರಬೇಕು. ಮೇಲಿನವುಗಳನ್ನು ನುಡಿಸುವುದೇ ಕೆಲ ಶಿವಶರಣರ ಕಾಯಕವು ಆಗಿತ್ತು. ಸಂಗೀತ, ಗಮಕ, ಮೊದಲಾದ ಕಲಾಮಾಧ್ಯಮಗಳ ಮೂಲಕ ಅವರು ತತ್ವಪ್ರಚಾರ ಕೈಗೊಂಡರು.



"ಉದಾ: 'ಬಹುರೂಪಿ ಚೌಡಯ್ಯ ವಿವಿಧ ವೇಷಗಳನ್ನು ತೊಟ್ಟು ಆವೇಷಕ್ಕೆ ತಕ್ಕ' ಅಭಿನಯ ಹಾಗೂ ಹಾಡುಗಾರಿಕೆಯಿಂದ ಪ್ರದರ್ಶನ ನೀಡುತ್ತಿದ್ದನು. ಇದು ಅವನ ವೃತ್ತಿ ಮನರಂಜನೆ ಮತ್ತು ತತ್ವ ಪ್ರಚಾರ ಎರಡನ್ನು ಆತ ತನ್ನ ಕಾಯಕದಿಂದ ನೆರವೇರಿಸುತ್ತಿದ್ದನು."[೧]

"ಭಾಷೆಯ ದೃಷ್ಟಿಯಿಂದ ಸ್ವರವಚನಗಳಲ್ಲಿ ನಡುಗನ್ನಡದ ಬಳಕೆ ಸಾಮಾನ್ಯವಾಗಿ ಕಂಡು ಬಂದರೂ ಹನ್ನೆರಡನೆ ಶತಮಾನದ ಶರಣರ ರಚನೆಗಳ ಭಾಷೆಯಲ್ಲಿ ಬೆಡಗು, ಸಾಂಕೇತಿಕತೆ ಹೆಚ್ಚು: ಸರಳತೆಯು ಕಡಿಮೆ. ನೂರೊಂದು ವಿರಕ್ತರು, ನಿಜಗುಣಶಿವಯೋಗಿಗಳ ಕಾಲಕ್ಕೆ ಅದು ಸ್ಪಷ್ಟವಾಗಿ ಸರಳವೆನಿಸುತ್ತದೆ. ಕೆಲವರಲ್ಲಂತೂ ಇತ್ತ ಶಿಷ್ಟವೂ ಅಲ್ಲದ ಅತ್ತ ದೇಸೀಯೂ ಅಲ್ಲದ ಎರಡರ ಮಿಶ್ರ ಭಾಷೆಯ ಬಳಕೆ ಕಂಡು ಬರುತ್ತದೆ. ಕಡಕೋಳ ಮಡಿವಾಳಪ್ಪ, ಕಡಲೂರ ಬಸವಲಿಂಗ ಶರಣರು, ಬಾಲಲೀಲಶಿವಾಂತ ಮಹಾಯೋಗಿಗಳ ರಚನೆಗಳಲ್ಲಿ ಅಚ್ಚ ದೇಸೀ ಭಾಷೆಯ ಸೊಗಡು ಅಧಿಕವಾಗಿ ಕಂಡುಬರುತ್ತದೆ."[೨]



ರೂಪದ ದೃಷ್ಟಿಯಿಂದ ದೇಸೀಯ ಮಟ್ಟುಗಳ ಬಳಕೆಯು ಕಂಡು ಬರುತ್ತದೆ. ಹಾಗೆಯೇ ಚಂದಮಾಮ ಪದ, ಉಯ್ಯಾಲೆ, ಗೊಂದಲ, ಮಂಗಳಾರತಿ ಪದ, ಕಣಿ, ಕೋಲಾಟ ಪದಗಳ ದಾಟಿಗಳು ಇದರಲ್ಲಿ ಸೇರಿಕೊಂಡಿವೆ.

ವಸ್ತು ಸ್ವರೂಪದ ದೃಷ್ಟಿಯಿಂದ ನೋಡುವುದಾದರೆ ವೀರಶೈವ ತತ್ವಪ್ರತಿಪಾದನೆಯು ಅಧಿಕವಾಗಿ ಕಂಡು ಬರುತ್ತದೆ. ಅಂದರೆ ಷಟಸ್ಥಲ, ಪಂಚಾಚಾರ, ಅಷ್ಟಾವರಣ, ಶಿವಯೋಗಗಳಿಗೆ ಸಂಬಂಧಿಸಿದ್ದು, ಇದರ ಜೊತೆ ಲೋಕನೀತಿ, ಶಿವಸ್ತುತಿ, ಶರಣಸ್ತೋತ್ರ, ಸಮಾಜವಿಮರ್ಶೆ, ವ್ಯಕ್ತಿಗತ ವಿಮರ್ಶೆಯು ಪ್ರಮುಖವಾಗಿ ಕಂಡುಬರುತ್ತವೆ. ಕಾಲಘಟ್ಟಕ್ಕೆ ಅನುಗುಣವಾಗಿ ಸ್ವರ ವಚನಗಳ ವಸ್ತುವಿನ್ಯಾಸ, ಭಾಷೆಯು ಭಿನ್ನವಾಗಿರುವುದನ್ನು ಆಯಾ ಕಾಲಘಟ್ಟದ ಶಿವಶರಣರ ಹಾಡುಗಳಲ್ಲಿ ವ್ಯಕ್ತವಾಗಿವೆ. ಆದರೂ

ಒಟ್ಟಾರೆಯಾಗಿ ಮೂಲ ಆಶಯವಾದ ವೀರಶೈವ ಮೂಲತತ್ವಪ್ರತಿಪಾದನೆ, ಲೋಕನೀತಿ, ಗುರುಮಹಿಮೆಯಂತಹ ವಸ್ತು ಆಶಯಗಳು ಹನ್ನೆರಡನೆ ಶತಮಾನದಿಂದ ಇಂದಿನವರೆಗೂ ಒಂದೆಯೇ. ಆದರೆ ಆಯಾ ಕಾಲದ ಸ್ವರ ವಚನಕಾರರು ಕಾಲಕ್ಕೆ ಅನುಗುಣವಾಗಿ ವಸ್ತುವನ್ನು ನೋಡುವ ಆಯಾಮ ಮಾತ್ರ ಭಿನ್ನವಷ್ಟೆ.

ಬಸವಾದಿ ಶಿವಶರಣರು ವಚನಗಳ ಜೊತೆಗೆ ಹಾಡುಗಳನ್ನು ರಚಿಸಿದ್ದಾರೆ. ಅವರುಗಳಲ್ಲಿ ಬಸವಣ್ಣ, ಅಲ್ಲಮ ಪ್ರಭು, ಅಕ್ಕಮಹಾದೇವಿ, ಚನ್ನಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚಯ್ಯ, ನೀಲಲೋಚನೆ, ಹಾವಿನಾಳ ಕಲ್ಲಯ್ಯ, ನಿಜಲಿಂಗ ಚಿಕ್ಕಯ್ಯ, ಅಮುಗಿದೇವಯ್ಯ, ಬಹುರೂಪಿ ಚೌಡಯ್ಯ, ಆದಯ್ಯ, ಮೊದಲಾದವರು ಈ ಪರಧಿಯಲ್ಲಿ ಬರುತ್ತಾರೆ.

ಇವರ ಕಾಲದ ಸ್ವರ ವಚನಗಳು ಪ್ರಮುಖವಾಗಿ ವೀರಶೈವ ಸಿದ್ಧಾಂತಗಳಿಗೆ ಮೀಸಲಾಗಿವೆ. ಅಷ್ಟಾವರಣ, ಷಟ್‌ಸ್ಥಲಗಳಂತಹ ತತ್ವ ನಿರೂಪಣೆಗೆ ಹೆಚ್ಚಿನ ಆದ್ಯತೆಯು ಕಂಡುಬರುತ್ತದೆ. ಬೆಡಗಿನ ಸ್ವರೂಪದಿಂದ ಕೂಡಿದ ಈ ಹಾಡುಗಳಲ್ಲಿ ವೀರಶೈವ ಸಿದ್ಧಾಂತಗಳ ಜೊತೆ ಜೊತೆಗೆ ಗುರು, ಲಿಂಗ, ಜಂಗಮ, ಸಮಾಜ ವಿಡಂಭನೆಯಂತಹ ವಸ್ತುಗಳು ಕಂಡುಬರುತ್ತವೆ.

ಇವರು ತಮ್ಮ ಆರಾಧ್ಯ ದೈವವನ್ನು ಲಿಂಗಾರ್ಚನೆ, ಅಂಕಿತಗಳ, ಮೂಲಕ ಕೊಂಡಾಡುತ್ತ ಅರ್ಚಿಸಿ ಪೂಜಿಸಲಾರಂಭಿಸಿದರು. ಇವರದು ಆತ್ಮಬಲ ಬೆಳೆಸಿಕೊಳ್ಳಲೆಂದು ಅನುಸರಿಸಿಕೊಂಡು ಬಂದ ಆತ್ಮ ನಿರೀಕ್ಷಣೆಯ ದಾರಿ. ತಮ್ಮನ್ನು ತಾವು ಮೊದಲು ಅರಿತುಕೊಂಡು ನಂತರ ಸಮಾಜದ ಸತ್ಯ ಚಾರಿತ್ರೆಯ ಹಿನ್ನೆಲೆಯಲ್ಲಿ ತಿದ್ದಲು ಹೊರಟವರು. ಸಾಂಘಿಕ ಜೀವನವನ್ನು ಹೊಂದಿ ಗುರುವಿನ ಮುಖೇನ ಆತ್ಮದ ಉದ್ಧಾರವನ್ನು ಇಚ್ಚಿಸಿದ ಕಾಯಕಯೋಗಿಗಳು.

ಬಸವಾದಿ ಶರಣರ ಜೀವನದ ತತ್ವಾದರ್ಶಗಳು ಅವರ ಸ್ವರವಚನಗಳಲ್ಲಿ ಕಂಡುಬರುತ್ತವೆ. ಅದನ್ನ ಆಯಾ ಶರಣರ ಹಾಡುಗಳ ಮೂಲಕ ವಸ್ತು ಸ್ವರೂಪವನ್ನು ಗ್ರಹಿಸಬಹುದು. ಬಸವಣ್ಣನವರು ಗುರು-ಶಿಷ್ಯರ ನಡುವಣ ಅವಿನಾಭಾವ ಸಂಬಂಧ ಕುರಿತು ತಮ್ಮ 'ಸೇವ್ಯ' ಎಂಬ ಹಾಡಿನಲ್ಲಿ 'ಭೈರವಿ' ರಾಗದ ಮೂಲಕ ಹೀಗೆ ತಿಳಿಸುತ್ತಾರೆ.

"ಗುರು ಮಹಾತ್ಮೆಯೊಳಗೆ ಶಿಷ್ಯ
ಬೇರಸಿ ಬೇರುದೋರದೆ
ಗುರುವೆ ಶಿಷ್ಯ, ಶಷ್ಯನೇ ಗುರು
ವಾದನಿತ್ಯ ನೇವ್ಯನು ॥ ಪ ॥

ಗುರುವಿನ ಅಂತರಂಗದೊಳಗೆ
ಉದಯವಾದ ಶಿಷ್ಯನು
ಗುರುವಿನಂತುಟಲ್ಲದೆ
ಬೇರೆ ಭಿನ್ನಭಾವವಿಲ್ಲ (ಶಿ.ಗೀ. ಪು. ೯೬)

ಎಂದು ಗುರುಶಿಷ್ಯರ ಸಂಬಂಧವನ್ನು ಕೊಂಡಾಡುತ್ತಾರೆ. ಹಾಗೆಯೇ 'ಗುರು ಮಹಾತ್ಮೆ'ವೆಂಬ ಸ್ವರ ವಚನದಲ್ಲಿ ಆತ್ಮೋದ್ಧಾರಕ್ಕೆ ಗುರುವೆ ಮೂಲ ಎನ್ನುವುದನ್ನು ಈಗ ತಿಳಿಸುತ್ತಾರೆ.

ರಾಗ : ಗುಜ್ಜರಿ

"ಗುರು ಚರಣವೆ ಗತಿ, ಗುರು ಚರಣವೆ ಮತಿ"
ಗುರು ಶಬ್ಧ ಸ್ಪರ್ಶಣ ಪಾವನವೆನಗೆ । ನಗು
ರೋರಧಿಕಂ ನಗುರೋರಧಿಕಂ ನಗು ।
ರೋರಧಿಕಂ ಎಂದೆನು ತೈದಾವೆ ಶೃತಿ ॥ ಪ ॥ (ಶಿ.ಗೀ. ಪು. ೧೬೨)

ಗುರುಪುರದ ಮಲ್ಲಯ್ಯನೆಂಬ ಶಿವ ಶರಣನು 'ತಾಮಸನಿರಸನ'ವೆಂಬ ಸ್ವರ ಗೀತೆಯನ್ನು 'ಮಲಹರಿ' ರಾಗದಲ್ಲಿ ಗುರುವಿನ ಸಾಕ್ಷಾತ್ಕಾರದಿಂದ ಲೋಕಜ್ಞಾನವನ್ನು ಪಡೆದ ನರನು ಆತ್ಮಸಾಕ್ಷಾತ್ಕಾರವನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತದೆ. ಈ ಜಗದಲ್ಲಿ ಹುಟ್ಟಿ ಗುರುವಿನ ಸಾಕ್ಷಾತ್ಕಾರ ಪಡೆಯದೇ ಶಿವಪಥವನ್ನು ಪಡೆಯಲು ಸಾಧ್ಯವಿಲ್ಲವೆನ್ನುವುದನ್ನು ಈ ಕೆಳಗಿನಂತೆ ಹಾಡುತ್ತಾನೆ.

ಗುರುವಿಂದಲುದಿಸಿ ಗುರುವಿನ ನಿಜವರಿಯದ
ನರನಿಗೆ ಶಿವಪಥ ವೆಲ್ಲಿಯದೋ ॥ ಪ ॥

ಗುರುವಿನಾದಿಯ ಶಿಷ್ಯನರಿಯನಾ
ಗುರು ಶಿಷ್ಯನಾ ಮೂಲವನರಿಯ
ಗುರು ಶಿಷ್ಯರಿಬ್ಬರು ಕೂಡಿಲಿಂಗವ
ನರಿಯರಿ* ಬ್ಬರಂ ಶಿವನೊಲ್ಲ (ಶಿ.ಗೀ. ಪು. ೧೭೭)

ಈ ಸ್ವರ ವಚನಗಳನ್ನು ಬಸವನ ಅಭಿಮಾನಿಗಳು ಲಿಂಗಾರ್ಚನೆಯ ಸಮಯದಲ್ಲಿ ಈಗಲೂ ಹಾಡುತ್ತಾರೆ.ಯಾವ ಒಬ್ಬನೆ ಭಕ್ತ ಮೋಕ್ಷ ಪಡೆಯಬೇಕೆಂದರೆ ಆತನು ಅಷ್ಟಾವರ್ಣಗಳನ್ನು ಅನುಸರಿಸಿ ನಡೆದರೆ ಮಾತ್ರ ಮೋಕ್ಷ ಸಾಧ್ಯ ಎಂಬುದು ವೀರಶೈವ ತತ್ವವಾದ್ದರಿಂದ ಅಷ್ಟಾವರ್ಣಗಳಲ್ಲಿ ಪ್ರಮುಖವಾದಂತಹ ಗುರು, ಲಿಂಗ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಭಕ್ತಿ, ಇವುಗಳಿಗೆ ಸಂಬಂಧಿಸಿದ ಅನೇಕ ಸ್ವರ ವಚನಗಳನ್ನು ಶರಣರು ರಚಿಸಿ ಹಾಡಿದ್ದಾರೆ. ಈ ರೀತಿಯ ಒಂದೊಂದು ಸ್ಥಳಕ್ಕೂ ಅನೇಕ ಸ್ವರ ವಚನಗಳನ್ನು ರಚಿಸಿದ್ದು ಅವುಗಳ ಮುಖ್ಯ ಉದ್ದೇಶ ಜನತೆಗೆ ಅವುಗಳ ಮಹತ್ವದ ಅರಿವನ್ನು ನೀಡುವುದಾಗಿತ್ತು. 'ಲಿಂಗ' ಮಹತ್ವವನ್ನು ಚನ್ನಬಸವಣ್ಣನು ಹೀಗೆ ನಿರೂಪಿಸಿದ್ದಾನೆ.

ರಾಗ : ನಾದ ರಾಮಕ್ರೀ

ಅಂಗದಲಿ ಲಿಂಗ ಸನ್ನಹಿತವಾಗಿಹನು: ಸ
–ರ್ವಾಂಗ ಮುಖವೆಲ್ಲ ಬರಿ ಲಿಂಗಮಯವು ॥ ಪ ॥

ಅಂಗದೊಳಂಗಸುಖ, ಅಂಗದೊಳು ಲಿಂಗಸುಖ
ಅಂಗಾಂಗವೆರಡಮಾಳು ತೆರೆಹಿಲ್ಲದೆ,
ಸಂಗವಾಗಿಹ ನಿಜ ಬೆಡಂಗು ಕೂಡಲ ಚನ್ನ
ಸಂಗನಂಗವ ಬೆರೆಸಿದ್ದಕ್ಕೆ ಬಲ್ಲ. (ಶಿ.ಗೀ., ಪು. ೧೭೫)

ಭಕ್ತವನು ಧರಿಸುವ 'ವಿಭೂತಿ'ಯ ಮಹಾತ್ಮೆಯನ್ನು ಬಸವಣ್ಣನವರು ಈ ಸ್ವರ ಗೀತೆಯಲ್ಲಿ ವಿಚಾರಯುಕ್ತವಾಗಿ ಹೇಳಿರುವುದನ್ನು ಗಮನಿಸಬಹುದು.

**ವಿಭೂತಿ** **ರಾಗ : ಭೈರವಿ**

"ಶ್ರೀವಿಭೂತಿಯನೊಲಿದು ಧರಿಸಿದ
ಡಾವ ಕರ್ಮವು ಹೊದ್ದಲಮ್ಮವು
ಪಾವನವ ಮಾಡುವುದು, ಪರಮುಪದವಿಯ ತೋರುವುದು ॥ ಪ ॥
(ಶಿ.ಗೀ. ಪು. ೧೩೮)

ವೀರಶೈವ ಪೂಜಾ ಸಾಧನಗಳಲ್ಲಿ ಒಂದಾದ ವಿಭೂತಿಗೆ ಪ್ರಥಮ ಸ್ಥಾನ. ಶಿವನಚಿತ್‌ಕಳೆಯಾಗಿರುತ್ತದೆ. "ಕಾಮಾದಿ, ಅರಿಷಡ್ ವರ್ಗಗಳನ್ನು ಸುಡುವಂತಹುದು. ವಿಭೂತಿಯನ್ನು ಧರಿಸುವುದರಿಂದ ಐಶ್ವರ್ಯವು ವೃದ್ಧಿಸುತ್ತದೆ, ಅಂತರಂಗದಲ್ಲಿ ಶಿವತತ್ವವನ್ನು ಪ್ರಕಾಶಪಡಿಸುತ್ತದೆ. ಜನನ-ಮರಣದ ಭಯವನ್ನು ದೂರ ಮಾಡುತ್ತದೆಂದು ವಿಭೂತಿಯ ಮಹಿಮೆಯನ್ನು ಕೊಂಡಾಡಿದ್ದಾರೆ."[೫] ಹೀಗೆ ಬಸವಣ್ಣ ಹಾಗೂ ಚನ್ನಬಸವಣ್ಣನವರ ಸ್ವರ ವಚನಗಳನ್ನು ಗಮನಿಸಿದಾಗ. ವೀರಶೈವ ತತ್ವ ಸಿದ್ಧಾಂತಗಳಿಗೆ ಹೆಚ್ಚಿನ ಒತ್ತು ಕೊಟ್ಟು ಪಂಚಾಚಾರ, ಅಷ್ಟಾವರ್ಣಗಳ ಬಗೆಗೆ ಅಧಿಕ ಸ್ವರ ಗೀತೆಗಳು ರಚಿತವಾಗಿರುವುದು ಕಂಡುಬರುತ್ತವೆ. ಚನ್ನಬಸವಣ್ಣನ ಹಾಡುಗಳಂತೂ ಅಧ್ಯಾತ್ಮ ಜ್ಞಾನಗಹನವಾದವುಗಳಾಗಿವೆ.

ಅರ್ಪಿತಾ ವಧಾನ ಮುಖದ ಸುಖವಂ
ತಪ್ಪದೆ ತಿಳಿದು ನೋಡಾ ॥ ಪ ॥

ಭಕ್ತೋಭೂಮ್ಯಂಗೋ, ಹಸ್ತಶ್ಚ
ಚಿತ್ತ ಮಾಚಾರಲಿಂಗಕಂ।
ಘ್ರಾಣಂ ತಸ್ಯ ಮುಖಂ, ಗಂಧಃ
ಅರ್ಪಿತ ತೃಪ್ತಿ ಭುಕ್ತವಾನ್ ॥ ೨ ॥

ಜಲಂ ಮಾಹೇಶ್ವರಾಂಗಂ ಚ
ಬುದ್ಧಿರ್ಹಸ್ತೋಪಿ ಸುದ್ಗುರುಃ ।

ಮುಖಿಜ್ಜಿಹ್ವಾ, ರಸಂ ಚೇದಂ

ಅರ್ಪಿತಂ ತೃಪ್ತಿ ಭುಕ್ತವಾನ್"    (ಶಿ.ಗೀ. ಪು. ೨೨೧)

ಸ್ಥಲ, ಅಂಗ, ಲಿಂಗ, ಹಸ್ತ, ಮುಖ, ಅರ್ಪಿತದಂತ ಕರ್ಣಗಳಿಂದ ಅರ್ಪಿತವೋ ಅವೆಲ್ಲಾ ಶಿವನಿಗೆ ಅರ್ಪಿತ. ಮುಖ್ಯವಾಗಿ ಶಿವ ಶರಣರ ಅಂಗಿಕ ಭೋಗಾನುಭವವೆಲ್ಲಾ ಶಿವಾರ್ಪಿತವೋ, ಅವರ ಅರ್ಪಿತವೆ ಉತ್ತಮ. ಶಿವ ಭಕ್ತನಾದವನಿಗೆ ಭೂಮಿಯೇ–ಅಂಗ, ಸುಚಿತ್ತವೇ ಹಸ್ತ. ಅವನು ತನ್ನ ಮೂಗಿನಿಂದ ಆಘ್ರಾಣಿಸಿದ ಎಲ್ಲಾ ವಿಧವಾದ ಗಂಧವನ್ನು ಆಚಾರ ಲಿಂಗಕ್ಕೆ ಅರ್ಪಿಸುವನು. ಎಂಬಂಥ ಆಧ್ಯಾತ್ಮ ವಸ್ತುಗಳಲ್ಲಿ ಇಂತಹ ಹಾಡುಗಳು ಜ್ಞಾನ ಗಹನವಾದವುಗಳಾಗಿವೆ.

ಶೂನ್ಯಸಿಂಹಾಸನಾಧಿಪತಿಯಾದ  ಅಲ್ಲಮ ಅತ್ಯುನ್ನತ ಮಟ್ಟದ ಅಧ್ಯಾತ್ಮಿ, ಗುಹೇಶ್ವರನಂತೆ ತಾವಾದ ಶರಣ ನೀತ. ವ್ಯಕ್ತಿಗತ ಆತ್ಮ ಪರಿಶೋಧನೆಯ ಕುರಿತು 'ವಾಗದ್ವೈತನಿರಸನ'ವೆಂಬ ಗೀತೆಯಲ್ಲಿ ಆಸೆ–ಆಮಿಷಗಳಿಂದ ಕೂಡಿದ ವ್ಯಕ್ತಿಯು ತನ್ನ ಆತ್ಮದಲ್ಲಿ ಅಡಗಿರುವ ಆತ್ಮವನ್ನೆ 'ಪ್ರಾಣಲಿಂಗ'ವೆಂದು ಎತ್ತಬಲ್ಲವೆಂದು ಎತ್ತಬಲ್ಲವೆಂಬ ಎಂಬ ಸೂಕ್ಷ್ಮ ಗ್ರಹಿಕೆಯನ್ನು ಹೀಗೆ ವಿವೇಚಿಸಿದ್ದಾರೆ.

ರಾಗ : ತೆಲುಗುಕಾಂಬೋದಿ

"ಪ್ರಾಣಲಿಂಗದ ಭಾವಸಂಗವ – ವಾಯು

ಪ್ರಾಣಿಗಳವರೆತ್ತ ಬಲ್ಲರೊ    ॥ ಪ ॥

ಆಶೆಯಾಮಿಷ ಮನದಲ್ಲಿ

ಭಾಷೆ ಪಲ್ಲಟ ನುಡಿಯಲ್ಲಿ

ಕ್ಲೇಶ ರೋಷ ವಿಷಯಗಳು ಹಿಂಗವು ।

ಈಶ್ವರನು ಪೂಜಿಸುವದೆಂತೋ"    (ಶಿ. ಗೀ ಪುಟ–೩೭೪)

ಅಕ್ಕಮಹಾದೇವಿಯ ಗೀತೆಗಳು ಮುಖ್ಯವಾಗಿ ಸಮಾಜದ ಡಾಂಭಿಕತನ, ಸಂಸಾರ ತ್ಯಜಿಸುವಿಕೆ, ಶರಣ ಸತಿ–ಲಿಂಗಪತಿ ಎನ್ನುವ ಭಾವದ ಗೀತೆಗಳೇ ಅಧಿಕ. 'ಸಂಸಾರಸಾಗರದಲ್ಲಿ ಬಿದ್ದ ಎನ್ನನ್ನು ನಿನ್ನತ್ತ ಸೆಳೆದುಕೊಂಡು ಮುಕ್ತಿ ಮಂಟಪಕ್ಕೆ ಕರೆದೊಯ್ಯೆಂದು.' 'ನೀ ನಂಬಿಗ' ಎಂಬ ಸ್ವರ ವಚನದಲ್ಲಿ ಹೀಗೆ ಪ್ರಾರ್ಥಿಸುತ್ತಾಳೆ.

ನೀನಂಬಿಗೆ    ರಾಗ : ರಾಮಗ್ರಿ

ನಂಬದೆ ಗುರುವೇ ನಂಬಿದೆ, ನಂಬಿದೆ ಸ್ವಾಮಿ

ನಂಬಿದೆ, ಅಂಬಿಕಾರಮಣ, ನೀನಂಬಿಗ ॥ ಪಲ್ಲವಿ ॥

ಹೊಳೆಯ ಬರವ ನೋಡಂಬಿಗೆ

ಸೆಳೆದು ಬಹಳ ಕಾಣಾಂಬಿನ

ಸುಳುದಿನೊಳಗೆ ಬಿದ್ದೆ ನಂಬಿಗ ಎನ್ನ

ಸೆಳೆದುಕೊಳ್ಳೋ ನೀನಂಬಿಗ (ಶಿ.ಗೀ. ಪು. ೨೪೯)

ಸಂಸಾರ ಜೀವನವನ್ನು ಹೊಳೆಗೆ ಹೋಲಿಸಿ ಅಂಬಿಗನಾದ ಚೆನ್ನಮಲ್ಲಿಕಾರ್ಜುನನ್ನು ಅದನ್ನು ನಡೆಸುತ್ತಿದ್ದಾನೆ. ಜೀವನವೆಂಬ ಹೊಳೆಯಲ್ಲಿ ಸೆಳೆವು, ಸುಳಿ, ಹೊಳೆ ಬರದಂತೆ ನೋಡಿಕೋ ಎನ್ನುತ್ತಾ ಎನ್ನ 'ಸೆಳೆದುಕೋ' ಎನ್ನುವ ಹಿತವನ್ನು ರಾಮಶ್ರೀ ರಾಗದಲ್ಲಿ ಹಾಡಿದ್ದಾಳೆ. ಇಂದಿಗೂ ಈ ಹಾಡು ಜನಮನದಲ್ಲಿದ್ದು, ಭಜನ ಪದವಾಗಿ ಬಳಸಿಕೊಂಡು ಪ್ರತಿದಿನವೂ ಹಾಡುತ್ತಿದ್ದಾರೆ.

ಗುರು, ಲಿಂಗ, ಜಂಗಮ ಇವುಗಳು ಪರಸ್ಪರ ಬೇರೆ ಬೇರೆ ಅಲ್ಲ ಒಂದೇ ಎನ್ನುವ ಅಂಶವನ್ನು ಬೆಡಗಿನ ರೂಪದ ಈ ಗೀತೆಯಲ್ಲಿ ಚೆನ್ನಬಸವಣ್ಣ ಈ ರೀತಿ ಹೇಳಿದ್ದಾರೆ.

**ತ್ರಿವಿಧ ಸಂಪತ್ತು** **ರಾಗ : ಗುಂಡಶ್ರೀ**

ಮೀರಿದ ಕ್ರೀಯಿಂದತ್ತಲಿ

ಮೂರೊಂದೆನಿಸದೆ, ಬೇರೆ

ತೋರದೆ ಲಿಂಗೈಕ್ಯವಾದ ಶರಣ || ಪ ||

ತನು ವಿಂಗಾಪುರ ಮನಸಿಂಗರಿವು, ಮ

ತ್ತಿ ನಿತಾದ ಭಾವದ ಭಜನೆಯ

ನೆನಹಂ ಮಾಡುವ ಅನಿಮಿಷ ಲಿಂಗದ

ಅನುಭವ ಸಂಪತ್ತಿನೊಳಾದ ಶರಣ (ಶಿ.ಗೀ. ಪು. ೧೪೫)

ತನುವಿನಲ್ಲಿ ಗುರು, ಪ್ರಾಣದಲ್ಲಿ ಲಿಂಗ, ಅರಿವಿನಲ್ಲಿ ಜಂಗಮ ಒಂದೇ ಎಂದು ಅದ್ವೈತಭಾವ ತಲೆದು, ಮಾಡುವ ಕ್ರಿಯೆಯನ್ನು ಬಿಡದೆ, ಅರಿವಿನಲ್ಲಿ ಒಂದೊಂದು ತಿಳಿದು ಸಮರಸವಾಗಬೇಕು. ಇದು ಬಹಿರಂಗ ಅರ್ಚನೆ, ಪೂಜೆ ಷೋಡಷೋಪಚಾರ ಕ್ರಿಯೆಗಳನ್ನು ಮೀರಿದ ಜ್ಞಾನೋಪಾಸನೆಯಿಂದ ಗುರು, ಲಿಂಗ, ಜಂಗಮ ಬೇರೆ ಬೇರೆ ಇಲ್ಲವೆ ಒಂದೇ ಎಂದು ತಿಳಿಯುವುದನ್ನು ಈ ಸ್ವರವಚನ ಸಾರುತ್ತದೆ.

ಆತ್ಮ-ಪರಮಾತ್ಮನ ಅನುಭಾವಕ್ಕೆ ಸಂಬಂಧಿಸಿದಂತೇ ಅನೇಕ ಸ್ವರವಚನಗಳು ಬಸವಾದಿ ಶರಣರಲ್ಲಿ ಕಾಣಸಿಗುತ್ತವೆ.

ತೋಱಸ್ಯೆ ಗುರುನಾಥನೆ ಲಿಂಗವನು

ಸೂಱುಗೊಂಡಿಹ ಶರಣರ || ಪಲ್ಲವ || (ಶಿ.ಗೀ. ೨೨೧)

ಲಿಂಗ, ನೀನೆ ಸಂಗ : ನಾ ನೀನೆನಲಿಕಿಲ್ಲ || ಪ || (ಶಿ.ಗೀ. ೨೦)

"ನುಡಿಯ ಗಡಣವ ಬೆಳಕು ಮರುತ ಮರಿಮಳದಂತೆ,

ಭಾವವಿಲ್ಲದೆ ಬಯಲು ಪರವು ತಾನೆ

ಅಱುಹು ಕುಱುಹಿನ ಮಱಹು ತೆಱಹಿಲ್ಲದಾ ಘನವು

ನಿಂದ ನಿಜಪದದಿಂದ ಪ್ರಭೆಯಾಯಿತು."[೪]

ಈ ಸ್ವರವಚನಗಳು ನಾದರಾಮಕ್ರಿ, ಗುಂಡಕ್ರೀ, ಮಧುಮಾಧವಿ ರಾಗಗಳಿದ್ದು, ಆತ್ಮ ಪರಮಾತ್ಮ ಅನುಭಾವಕ್ಕೆ ಸಂಬಂಧಿಸಿದ ವಚನಗಳಾಗಿವೆ. ಸಂಸಾರದ ವೃಥಾ ಬೇಯುವಿಕೆ ಹಾಗೂ ನಿರುಪಯುಕ್ತ ಗುಣಗಳ ಬಗ್ಗೆ ಮತ್ತು ತೋರಿಕೆಯ ಭಕ್ತಿಯ ಬಗ್ಗೆ ದಾಸಿಮಯ್ಯ ಈ ಹಾಡಿನಲ್ಲಿ ಹೀಗೆ ಹೇಳಿದ್ದಾರೆ.

ರಾಗ : ಬವುಳಿ

ನಿಜವಾಗದೆಂದು ಗಜ ಬಜೆ ಘನ

ಗುಜು ಗುಜು ಮಾಣದು ಮನದಲ್ಲಿ ‖ ಪಲ್ಲವಿ ‖

ಪರಸ್ತ್ರೀಯರ ಕಂಡು ಪಿರಿದು ಸಂತೋಷ ಮೂಡಿ

ಭರವಶದಿಂ ಎರೆದಿಹೆನೆಂಬೆ

ಧರೆಯೊಳ ಕೊಳ್ಳದು ಹರ ಮನಗಾಬನು

ನರಕ ತಪ್ಪದು ಮುಂದೆ ಎಲೆ ಮನವೆ (ಶಿ.ಗೀ. ಪು. ೩೯೯)

ಮನದೊಳಗೆ ಅನ್ಯಥಾ ಚಂಚಲ ಮನಸ್ಸನ್ನು ಹೊಂದಿ ಲೌಕಿಕ ಜಗತ್ತಿನ ಕಾಮ ಮೋದಗಳಿಗೆ ಒಳಗಾಗಿ ಹೊರನೋಟಕ್ಕೆ ಸಭ್ಯ ಭಕ್ತನಂತೆ ವರ್ತಿಸುವವರಿಗೆ ನರಕ ತಪ್ಪದು ಎಂಬುದುನ್ನು ಅನೇಕ ಉದಾಹರಣೆಗಳ ಮೂಲಕ ತಿಳಿಸಿದ್ದಾರೆ. ಹಾಗೆಯೇ ಬತ್ತಲೇಶ್ವರರೆಂಬ ಸ್ವರವಚನಕಾರರು 'ಶಂಕರಾಭರಣರಾಗ'ದಲ್ಲಿ ರಚಿಸಿದ 'ತನ್ನ ತಾನರಿಯಬೇಕು' ಎಂಬ ಹಾಡಿನಲ್ಲಿ ಶಿವಭಕ್ತನಾದವನು, ಸಮಾಜದಲ್ಲಿ ಸಚಾರಿತ್ರ್ಯವನ್ನು ಹೇಗಿರಬೇಕು, ಅವನಲ್ಲಿ ಎಂತಹ ನಡತೆಯೂ ಇರಬೇಕೆಂಬುದು ಹೀಗೆ ತಿಳಿಸುತ್ತಾರೆ.

"ತನ್ನ ತಾನಱಿಯಬೇಕು ತರಹರವಿರಬೇಕು

ಓಂ ನಮಶ್ಶಿವಾಯೆಂದು ಪರಿಸುತ

ಓರೆಯಿಲ್ಲದಿರಬೇಕು" ‖ ಪ ‖

ಒಡಲ ಗುಣವನೆಲ್ಲ ಅಳಿಯಬೇಕು

ಕಡಲಂತೆ ಕರುಣವ ತಾಳಬೇಕು

ದೃಢಭಕ್ತಿ ಜ್ಞಾನ ಮುಂದುವರಿಯಬೇಕು

ತೊಡರಿದ ಮಾಯೆಯ ತೊತ್ತಳದುಳಿಯಬೇಕು (ಶಿ.ಗೀ. ಪು. ೩೦೧)

ಹೀಗೆ ಬಸವಾದಿ ಪ್ರಮಥರ ಸಾಲಿನಲ್ಲಿ ಬರುವ ಹದಿನಾರಕ್ಕೆ ಹೆಚ್ಚು ಶಿವಶರಣರ ಸ್ವರ ವಚನಗಳನ್ನು ಗಮನಿಸಿದ ವೀರಶೈವ ಸಿದ್ಧಾಂತ ತತ್ವಗಳಾದ ಗುರು, ಲಿಂಗ, ಜಂಗಮ, ಭಕ್ತ, ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ

ಇವುಗಳನ್ನು ಬಗೆಗಿನ ವಸ್ತುವುಳ್ಳ ಸ್ವರಗೀತೆಗಳೇ ಅಧಿಕವಾಗಿ ಕಂಡುಬರುತ್ತವೆ. ಬಸವಾದಿ ಪ್ರಮಥ ಶಿವಶರಣರ ಸ್ವರವಚನ ಕೃತಿ ಸಂಕಲನಗಳ ಸಂಪಾದಿತ 'ಶಿವದಾಸ ಗೀತಾಂಜಲಿ'. 'ಸುಮಾರು ಇಪ್ಪತ್ತೇಳು ಶರಣ'ರಯಲ್ಲಿ ಇನ್ನೂರು ನಲವತ್ತಕ್ಕೂ ಅಧಿಕ ಸ್ವರವಚನಗಳಲ್ಲಿ ಬಹುತೇಕ ವೀರಶೈವ ತತ್ವ ಸಿದ್ಧಾಂತಗಳ ಸ್ವರಗೀತೆಗಳೇ ಅಧಿಕ. ಇದಕ್ಕೆ ಕಾರಣವು ಇರಬಹುದು. ಆರಂಭದಲ್ಲಿ ವೀರಶೈವ ಧರ್ಮದ ಹೊಳವು, ತತ್ವ ಚಿಂತನೆಗಳನ್ನು ಜನತೆಗೆ ತಿಳಿಸಬೇಕಿತ್ತು. ಆದ್ದರಿಂದ ಬಸವಣ್ಣ, ಅಲ್ಲಮ, ಚೆನ್ನಬಸವಣ್ಣರ ರಚನೆಗಳೆಲ್ಲ ಅತ್ತ ಜಟಿಲವೂ ಅಲ್ಲ ಇತ್ತ ಸುಲಭವು ಅಲ್ಲದ ಮಾದರಿಯ ಬೆಡಗಿನ ರೂಪದ ಸ್ವರ ಗೀತೆಗಳು ಕಂಡುಬರುತ್ತವೆ.

ತಮ್ಮ ಅಂಕಿತದ ಮೂಲಕ ಶಿವವನ್ನು ಕ್ಷಣಕ್ಷಣಕ್ಕೂ ಆರಾಧಿಸುತ್ತಾ ಅವನ ಸನ್ನಿಧಿಗೆ ಭಕ್ತನು ಮುಟ್ಟುವ ಪರಿಯ ವಸ್ತುವಾಗುಳ್ಳ ಹಾಡುಗಳನ್ನು ಮೋಕ್ಷವನ್ನು ಪಡೆಯಲು ಗುರು, ಲಿಂಗ, ಜಂಗಮ ಬಗೆಗಿನ ವಸ್ತು ಇರುವ ಗೀತೆಗಳು ಅಧಿಕವಾಗಿ ಕಾಣಸಿಗುತ್ತವೆ. ಈ ಆದರ್ಶವು ಶರಣರ ಆದಿಯಲ್ಲಿ ನಂತರ ಬಂದ ಅನೇಕ ಶಿವಶರಣರ ಹಾಡುಗಳ ಮೂಲವಸ್ತುವು ವೀರಶೈವ ತಾತ್ವಿಕತೆಗೆ ಸಂಬಂಧಿಸಿದ್ದರೂ ಅದರ ಜೊತೆ ಜೊತೆಗೆ ಸಾಮಾಜಿಕ ವಿಡಂಬನೆ, ಸಂಸಾರ ಜಂಜಾಟ, ವಿಡಂಭನ ಭಕ್ತಿಗೆ ಸಂಬಂಧಿಸಿದ ಹಾಡುಗಳು ಅಕ್ಕಮಹಾದೇವಿ, ಸಿದ್ಧರಾಮ, ಆದಯ್ಯ, ಹಾವಿನಹಾಳ ಕಲ್ಲಯ್ಯರ ಗೀತೆಗಳಲ್ಲಿ ಕಾಣಸಿಗುತ್ತವೆ. ಆರಂಭದಲ್ಲಿ ಶಿವತತ್ವ ಚಿಂತನೆಯೇ ಪ್ರಮುಖ ವಸ್ತುವಾಗುಳ್ಳ ಗೀತೆಗಳನ್ನು ರಚಿಸಿದ ಶರಣರು ಇದರ ಜೊತೆಗೆ ಸಮಾಜವನ್ನು ಪರಿವರ್ತಿಸುವ ಆಶಯವನ್ನು ಹೊಂದಿದ್ದರಿಂದ ಸಾಮಾಜಿಕ ವಿಡಂಬನೆಯಂತಹ ಗೀತೆಗಳನ್ನು ಸರಳವು ಸುಲಭವು ಆದ ರೀತಿಯಲ್ಲಿ ರಚನೆಗೊಂಡಿರುವುದನ್ನು ಅಕ್ಕಮಹಾದೇವಿಯ 'ನೀನಂಬಿಗ', 'ನೀಲಾಲೋಚನೆಯ' - 'ಸಹ ಭೋಜನ'ದಂತ ಹಾಡುಗಳ ಮೂಲಕ ನೋಡಬಹುದು.

ಇಲ್ಲಿ ಗಮನಿಸಬೇಕಾದ ಮತ್ತೊಂದು ಪ್ರಮುಖ ಅಂಶವೆಂದರೆ ಆರಂಭದ ಸ್ವರಗೀತೆಗಳು ಬೆಡಗಿನ ರೂಪದ ಮಾದರಿಯಲ್ಲಿ ರಚಿತಗೊಂಡು ನಂತರದಲ್ಲಿ ಭಾಷೆಯಲ್ಲಿ ಸಡಿಲಗೊಂಡು ಗ್ರಹಿಕೆಯ ದೃಷ್ಟಿಯಿಂದ ಸುಲಭವಾದ ರೀತಿಯಲ್ಲಿ ರಚಿತಗೊಂಡಿವೆ. ಇದಕ್ಕೆ ಕಾರಣವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಆರಂಭದಲ್ಲಿ ಭಾಷೆಯ ಜಟಿಲತೆಯನ್ನು ಒಳಗೊಂಡ ಸ್ವರಗೀತೆಗಳು ಜನರಿಗೆ ಅರ್ಥಗ್ರಹಿಕೆಯ ದೃಷ್ಟಿಯಿಂದ ಕಷ್ಟಕರವಾಗಿರಬೇಕು. ಇದನ್ನು ಅರಿತು ಜನಪದರ ಆಡುನುಡಿಯಲ್ಲೆ ಬರೆದಲ್ಲಿ ಹೆಚ್ಚು ಸನ್ನಿಹತವು ಆಗಬಹುದೆಂಬುದನ್ನು ಮನಗಂಡು ಒಂದೇ ಕಾಲಘಟ್ಟದ ಬಸವಾದಿ ಶರಣರೆಲ್ಲ ಭಾಷೆಯನ್ನು ಸಡಿಲಗೊಳಿಸಿ, ವೀರಶೈವ ಪರಿಕರಗಳಾದ, ವಿಭೂತಿ, ರುದ್ರಾಕ್ಷಿ, ಲಿಂಗದಂತಹ ವಸ್ತುಗಳನ್ನು ತೆಗೆದುಕೊಂಡು ಅವುಗಳ ಮೂಲಕ ಸಮಾಜಮುಖಿ ಸ್ವರಗೀತೆಗಳನ್ನು ಜೀಸಿರುವುದನ್ನು 'ಶಿವದಾಸ ಗೀತಾಂಜಲಿ'ಯಲ್ಲಿನ ಹಾಡುಗಳನ್ನು ಆ ಮೂಲಕ ಗ್ರಹಿಸಬಹುದಾಗಿದೆ.

ಬಸವಾದಿ ಶರಣ ನಂತರದಲ್ಲಿ ಬಂದ ಸ್ವರವಚನಕಾರರು ಇವರ ಹಾದಿಯಲ್ಲೇ ಗೀತೆಗಳನ್ನು ರಚಿಸುತ್ತಾ ವಸ್ತುವಿನ ರೂಪದಲ್ಲಿ ಸ್ವರ ಬದಲಾವಣೆ ಮಾಡಿರುವುದನ್ನು ಅವರ ಸ್ವರಗೀತೆಗಳ ಮೂಲಕ ಗ್ರಹಿಸಬಹುದು. ಬಸವಾದಿ ಶರಣರ ತರುವಾಯ ಹರಿಹರ, ರಾಘವಾಂಕರ ಕಾಲದಲ್ಲಿ ಸ್ವರವಚನ ಸಾಹಿತ್ಯ ರಚನೆಯು ಕ್ಷೀಣ ರೂಪವನ್ನು ಕಂಡರೂ ಮುಂದೆ ನೂರೊಂದು ವಿರಕ್ತರ ಕಾಲಕ್ಕೆ ಉನ್ನತ ಮಟ್ಟಕ್ಕೆ ಮುಟ್ಟುತ್ತದೆ. ಒಂದರ್ಥದಲ್ಲಿ

ಹೇಳುವುದಾದರೆ ಪರಂಪರೆ ಹಾಗೂ ಸತ್ವದ ದೃಷ್ಟಿಯಿಂದ ಈ ಕಾಲದ ಸ್ವರವಚನಗಳು ಮಹತ್ವಪಡೆಯುತ್ತವೆ. "ಈ ಯುಗದಲ್ಲಿ ಸ್ವರವಚನ ಸಾಹಿತ್ಯವನ್ನು ಕರಸ್ಥಲ ನಾಗಿದೇವ, ಗುರುಬಸವ, ನಿರ್ವಾಣಿ ಬೋಳೇಶ, ಬತ್ತಲೇಶ್ವರ, ವೀರಣ್ಣದೇವ, ಮಗ್ಗೇಯ ಮಾಯಿದೇವ, ಗುರುಬಸವ, ನಿರ್ವಾಣಿಬೋಳೇಶ, ಬತ್ತಲೇಶ್ವರ, ವೀರಣ್ಣದೇವ, ಮಗ್ಗೇಯ ಮಾಯಿದೇವ, ಕಪಿಲಿಂಗ, ಕಾರುಗಹಳ್ಳಿ ಕಾಂತಯ್ಯ, ಕೊಡೇಕಲ್ಲ ಬಸವಣ್ಣ ಈ ಯುಗದಲ್ಲಿ ಸ್ವತಂತ್ರ ಗೀತೆಗಳನು ರಚಿಸಿ ಹಾಡಿದರು. ಈ ಶರಣರ ಸ್ವತಂತ್ರ ರಚನೆಗಳನ್ನು ಮಹಾಲಿಂಗದೇವ, ಜಕ್ಕಣಾರ್ಯ, ಸಿದ್ಧಲಿಂಗರ ಏಕೋತ್ತರ ಶತಸ್ಥಲ, ಶಿವಗಣಪ್ರಸಾದಿ ಮಹಾದೇವಯ್ಯ, ಹಲಗೆದೇವ, ಗುಮ್ಮಳಾಪುರದ ಸಿದ್ಧಲಿಂಗರ ಶೂನ್ಯ ಸಂಪಾದನೆಗಳು, ಶಿವಯೋಗ ಪ್ರದೀಪಿಕೆ ಮೊದಲಾದ ಸಂಕಲನ ಕೃತಿಗಳು ಸ್ವರವಚನ ಸಂಯೋಜನ ಸಾಹಿತ್ಯವನ್ನು ಪ್ರತಿನಿಧಿಸುತ್ತವೆ."[೫]

ಈ ಕಾಲಘಟ್ಟದಲ್ಲಿ ಬಂದ ಸ್ವರವಚನ ಸಾಹಿತ್ಯದ ವಸ್ತುವಿನಲ್ಲಿ ಮುಖ್ಯವಾಗಿ ಸಾಮಾಜಿಕ ವಿಚಾರಗಳಿಗಿಂತ ತಾತ್ವಿಕ ಜಿಜ್ಞಾಸೆ ಪ್ರಮುಖವಾಗಿ ಕಾಣಿಸುತ್ತದೆ. ಭಾಷೆಯಲ್ಲಿ ಸ್ಪಷ್ಟತೆಯಿಲ್ಲ, ಸರಳ ಆಡುಮಾತಿನ ಲಯದಲ್ಲಿ ಪದ್ಯಗಳು ರಚಿತವಾಗಿವೆ. ಸಾಹಿತ್ಯಗುಣದ ದೃಷ್ಟಿಯಿಂದ ಕಡಿಮೆ ಎನಿಸಿದರೂ ಕೆಲ ಅನುಭಾವಿಗಳ ಲೌಕಿಕ ವಿಷಯ ಬಗೆಗಿನ ಹಾಡಿನಲ್ಲಿ ಸಾಹಿತ್ಯಿಕ ಗುಣವನ್ನು ಕಾಣಬಹುದಾಗಿದೆ. ಈ ಕಾಲದ ಬಹಳಷ್ಟು ಸ್ವರವಚನಗಳು ತಾತ್ವಿಕ ದೃಷ್ಟಿಯಿಂದ ಪಾಂಡಿತ್ಯನಿಷ್ಟವೆನಿಸಿದರು. ಅಭಿವ್ಯಕ್ತಿಯ ಮಾರ್ಗದಲ್ಲಿ ಶುದ್ಧ ದೇಶಿಯತೆಯನ್ನು ಮೈಗೂಡಿಸಿಕೊಂಡಿವೆ. ಮಾನವ ಜೀವನದ ವಿವಿಧ ಮುಖಗಳನ್ನು ನಿರ್ವಾಣಿ ಬೋಳೇಶನು ಈ ಸ್ವರವಚನಗಳಲ್ಲಿ ಜೀವಂತವಾಗಿ ಹೀಗೆ ನಿರೂಪಿಸಿದ್ದಾನೆ.

ಅಂಬರ ಚಪ್ಪರದಡಿಯಲಿ ಘನ
ಕುಂಭಿಯನೆ ಹಸೆಯ ಹಾಸಿ
ಇಂಬಪ್ಪ ಜೀವಾದಿ ಹರಣ ನಿಬ್ಬಣಿಗರು
ಸಂಭ್ರಮ ಸಂಭ್ರಮಿಸಿದರು ನೋಡಿ || ಪ ||

ಇಪ್ಪತ್ತೈದು ಬಾಲೆಯರೆಲ್ಲರೂ ಕೂಡಿ
ತಪ್ಪದೆ ಕಳಸ ಕನ್ನಡಿವಿಡಿದೂ
ಒಪ್ಪವಿಡುತ ಶೃಂಗಾರದ ಗರಿಗಟ್ಟಿ
ಇಪ್ಪರು, ಮದುವೀಯ ತಿಂಥಿಣಿ ನೋಡಿರೆ (ಶಿ.ಗೀ. ಪು. ೨೫೭)

ಎಂದು ಆಡುನುಡಿಯಲ್ಲಿ ಶುದ್ಧ ಜನಪದ ಶೈಲಿಯಲ್ಲಿ ಹಿಡಿ ಮದುವೆಯ ಚಿತ್ರಣವನ್ನು ಈ ಹಾಡಿನ ಮೂಲಕ ಕಟ್ಟುಕೊಟ್ಟಿದ್ದಾರೆ.

ಈ ಯುಗದ ಕೆಲ ಸ್ವರಗೀತೆಗಳಲ್ಲಿ ಬೆಡಗಿನ ರೂಪದ ಹಾಡುಗಳು ಕಂಡುಬರುತ್ತವೆ. ನಿರ್ವಾಣಿ ಬೋಳೇಶ, ಕರಸ್ಥಲ ನಾಗಿದೇವರ ಸ್ವರವಚನಗಳು ಬೆಡಗಿನ ರೂಪದಲ್ಲಿದ್ದು ಪದಗಳ ಅರ್ಥಗ್ರಹಿಸಿದಾಗ ದೇಶಿಯ ಹಿನ್ನೆಲೆಯಲ್ಲಿ

ಸುಲಭವಾಗಿ ಗ್ರಹಿಕೆಯಾಗುತ್ತವೆ. ಹಾಗೆಯೇ ಅನುಭಾವ, ತತ್ವ, ಯೋಗ ಮೊದಲಾದ ಗಂಭೀರ ವಿಷಯಗಳನ್ನು ಈ ಅನುಭಾವಿಗಳು ಲೌಕಿಕ ಜಗತ್ತಿನ ಪರಿಚಿತವಾದ ಪ್ರಾಣಿ, ಪಕ್ಷಿ, ವ್ಯಕ್ತಿ, ವಸ್ತುಗಳಂತಹ ಸಂಕೇತಗಳನ್ನು ಬಳಸುವುದರ ಮೂಲಕ ಗ್ರಹಿಕೆಗೆ ಸುಲಭ ಸಾಧ್ಯವಾಗುವಂತೆ ಮಾಡುತ್ತಾರೆ. ಬತ್ತಲೇಶ್ವರನು ಭೈರವಿ ರಾಗದಲ್ಲಿ ರಚಿತಗೊಂಡ ಹಾರಿತೋ ಹಂಸ ಎಂಬ ಹೃನ್ಮನದ ಗೀತೆಯಲ್ಲಿ ಸಾಧಕನ ಮನೋವಿಕಾಸದ ವಿವಿಧ ಮಜಲುಗಳ ಕುರಿತು ತಿಳಿಸಿದ್ದಾನೆ.

**ಹಾರಿತೋ ಹಂಸ** **ರಾಗ : ಭೈರವಿ**

"ಹಾರಿತೋ ಹಂಸ, ಹಾರಿತೋ
ಮೂರು ನದಿಯ ದಾಂಟೆ ಮುಕುತಿ ರಾಜ್ಯದತ್ತ ‖ ಪ ‖

ಕರ್ತೃ ಭೃತ್ಯ ಶತ್ರು ಮಿತ್ರಗಳಿಲ್ಲದೆ
ಉತ್ತರಗತಿಯತ್ತ ಉನ್ಮನಿಯ ಪಥದತ್ತ

ಅಪರಾಪರವ ದಾಂಟಿ ಸುಪರಾಪರವ ಮೀರಿ
ವಿಪರೀತವಾದ ನಿರ್ವಾಣ ಲಿಂಗದತ್ತ"[೬]

(ಶಿ.ಗೀ. ಪು.೩೦೪)

ಇಲ್ಲಿ ಜೀವವನ್ನು ಹಂಸಕ್ಕೆ ಹೋಲಿಸಿ, ಮೂರು ನದಿಗಳಾದ ತ್ರಿನಳದಾಂಟಿ, ಸ್ವಾದಿಷ್ಠಾನ ಮಣಿಪೂರಕ ಚಕ್ರಗಳನ್ನು ದಾಟಿ ಭಕ್ತನ ಜೀವ ಶಿವಯೋಗದಲ್ಲಿ ನೆಲಸಿ ಪರಮಾತ್ಮನಲ್ಲಿ ಲೀನವಾಗುತ್ತದೆಂಬುದನ್ನು ಅರ್ಥಪೂರ್ಣವಾದ ಉಪಮೆಗಳನ್ನು ಬಳಸುವುದರ ಮೂಲಕ ವರ್ಣಿಸಿರುವುದು ಕಾಣಿಸುತ್ತದೆ. ಹೀಗೆ ಈ ಯುಗದಲ್ಲಿ ಇಂತಹ ಆಧ್ಯಾತ್ಮಿಕ, ಯೋಗದಂತ ವಿಷಯಗಳು ಪ್ರಾಣಿ, ಪಕ್ಷಿಗಳಂತ ಸಂಕೇತ ಬಳಸುವುದರಿಂದ ಸುಲಭವಾಗಿ ಗ್ರಹಿಸಲು ಸಾಧ್ಯವಾಯಿತು. ಒಟ್ಟಾರೆಯಾಗಿ ಹೇಳುವುದಾದರೆ ಬಸವಾದಿ ಶರಣರು ವೀರಶೈವ ಸಿದ್ಧಾಂತಗಳನ್ನು ಸಮಾಜಮುಖಿಯಾಗಿ ಹಾಡುತ್ತ ಹೋದರೆ ನೂರೊಂದು ವಿರಕ್ತಯುಗದ ಸ್ವರವಚನಕಾರರು ಸೃಷ್ಟಿಸಿದ ಹಾಡುಗಳು ಸಮಾಜೋದ್ಧಾರಕ್ಕಿಂತ ಆತ್ಮೋದ್ಧಾರವನ್ನು ಮುಖ್ಯವಾಗಿ ಪ್ರತಿಪಾದಿಸುತ್ತವೆ.

ನೂರೊಂದು ವಿರಕ್ತಯುಗದ ಸ್ವರವಚನಕಾರರ ನಂತರ ಅಂದರೆ ಸರಿಸುಮಾರು ವಿಜಯನಗರ ಅವನತಿಯ ನಂತರ ತೋಂಟದ ಸಿದ್ಧಲಿಂಗಯತಿಯ ಆದಿಯಾಗಿ ಅತಿ ಜನಪ್ರಿಯ ಸ್ವರವಚನಕಾರರು ಹಾಗೂ ಅಸಕ್ತಿ ಹಾಡುಗಳು ಹುಟ್ಟಿಕೊಂಡಿವೆ. ಈ ಕಾಲಘಟ್ಟದಲ್ಲಿ ಕವಿಲಿಂಗ ಜಿಗುನಿ ಮರುಳದೇವ, ಕಂಬಾಳದ ಶಾಂತಮಲ್ಲೇಶ, ಸಿದ್ಧಲಿಂಗ, ಗಂಗೇಳ, ಶಂಕರದೇವ, ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿ ಇವರ ಗೀತೆಗಳು ಸೇರುತ್ತವೆ. ಎಲ್. ಬಸವರಾಜರು ಶಿವದಾಸ ಗೀತಾಂಜಲಿಯಲ್ಲಿ ಬಸವಾದಿ ಪ್ರಮಥರ ಹಾಡುಗಳ ಜೊತೆಗೆ ನಿಜಗುಣ ಶಿವಯೋಗಿ, ಶಂಕರದೇವ, ಕರಸ್ಥಲ ನಾಗಿದೇವ, ಬತ್ತಲೇಶ್ವರರ ಹಾಡುಗಳನ್ನು ಸಂಪಾದಿಸಿದ್ದಾರೆ. ಬಸವಾದಿ ಶರಣರ ಸಾಲಿನಲ್ಲಿ ಬರುವ ಪ್ರಮುಖ ಸ್ವರವಚನಕಾರರ ಸ್ವರವಚನಗಳನ್ನು ಪ್ರಸ್ತುತಪಡಿಸುವ ಉದ್ದೇಶದಿಂದ ಪ್ರಸ್ತುತಪಡಿಸಿದ್ದಾರೆ.

ತೋಂಟದ ಸಿದ್ಧಲಿಂಗಯುಗದ ಸ್ವರವಚನಗಳ ವಸ್ತು ಅಷ್ಟಾವರಣ, ಷಟ್ಸ್ಥಲ, ಲೋಕನೀತಿ ಭಕ್ತಿ, ಶಿವಪಾರಮ್ಯ ಇವುಗಳನ್ನು ಸ್ಥೂಲವಾಗಿ ಹೇಳುವುದು. ಹಾಗೆಯೇ ತೋಂಟದ ಸಿದ್ಧಲಿಂಗಯತಿಯ ವ್ಯಕ್ತಿತ್ವವನ್ನು ವಸ್ತುವಾಗಿಟ್ಟುಕೊಂಡು ಕೋಲುಪದ, ಮಂಗಳಾರತಿ, ಹಾಡುಗಳು ಸ್ತುತಿರೂಪದ ಹಾಡುಗಳ ಮಹಾಪೂರವೆ ಹರಿದುಬಂದಿದೆ. ಅಲ್ಲದೆ ಈ ಕಾಲಘಟ್ಟದ ಸ್ವರವಚನಗಳು ಇದೇ ಕಾಲಘಟ್ಟದಲ್ಲಿ ರಚಿತವಾದ ಕೀರ್ತನೆಗಳಲ್ಲಿನ ಸಾಮ್ಯತೆಯೂ ಈ ಕಾಲಘಟ್ಟದ ಹಾಡುಗಳಲ್ಲಿ ಕಂಡುಬರುತ್ತದೆ. ಜಿಗುನಿ ಮರುಳದೇವರು ತಮ್ಮ ಗುರುವಾದ ತೋಂಟದ ಸಿದ್ಧಲಿಂಗಯತಿ ಕುರಿತು ಹಾಡಿದ ಈ ಗೀತೆಯು ಸಿದ್ಧಲಿಂಗಯತಿಗಳ ಭವ್ಯ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿದೆ. ಹಾಗೆಯೇ ಈ ಹಾಡು ಪುರಂದರದಾಸರ "ದೇವ ಬಂದ ನಮ್ಮ ಸ್ವಾಮಿ ಬಂದೆ" ಎಂಬ ಕೀರ್ತನೆಯನ್ನು ನೆನಪಿಗೆ ತರುವುದನ್ನು ಕಾಣಬಹುದು.

"ಯೋಗಿ ಬಂದ ಕಾಣೆಯಮ್ಮ ರಾಗವಿ
ರಾಗ ವಿದೂರ ಜಂಗಮಲಿಂಗ ಬಂದ ಕಾಣೆ
ಸುರಚಿರ ಬ್ರಹ್ಮಾಂಡಗಳೆಯಕಟ ಬಂ
ಧುರ ದಿವ್ಯದೇಹದೊಳಖಿಲ ಲೋಕ
ಅರರೆ ಗಗನವಾನನ ದಿಕ್ಕುಗಳೆ ತೋಳು
ವರ ಚಂದ್ರ ಸೂರ್ಯರೆಸೆವ ಕಂಗಳ ಚೆಲ್ವಯೋಗಿ"[೬]

ಸಿದ್ಧಲಿಂಗರು ಶ್ರೇಷ್ಠ ಸ್ವರವಚನಕಾರರಾಗಿದ್ದು, ಹನ್ನೆರಡನೆಯ ಶತಮಾನದ ಬಸವಣ್ಣನವರ ಮರುವ್ಯಕ್ತಿತ್ವದಂತೆ ಶಿಷ್ಯರು ಕಾಣುತ್ತಿದ್ದರು. ಸಿದ್ಧಲಿಂಗರ ಸ್ವರವಚನಗಳೆಲ್ಲ ಷಟ್ಸ್ಥಲಗಳ ಪ್ರತಿಪಾದನೆಗೆ ಹೆಚ್ಚಿನ ಒತ್ತನ್ನು ನೀಡಿರುವುದಲ್ಲದೆ ಅವರ ಪ್ರಭಾವ ಆ ಕಾಲದ ಇತರ ಸ್ವರವಚನಕಾರರ ಮೇಲೆ ತೀವ್ರ ಪ್ರಮಾಣದಲ್ಲಿ ಆಗಿತ್ತೆನ್ನಬಹುದು. ವೀರಶೈವ ಆಚರಣೆಗಳಲ್ಲಿ ಒಂದಾದ ಇಷ್ಟಲಿಂಗದ ಬಗೆಗೆ ವೀರಶೈವರಲ್ಲಿ ವಿಶಿಷ್ಟ ಸ್ಥಾನವಿದೆ. ಶಿವಶರಣರ ದೃಷ್ಟಿಯಲ್ಲಿ ಇಷ್ಟಲಿಂಗವು ಶಿವನಿಗಿಂತ ಶ್ರೇಷ್ಠತರವಾದುದು. ಸಿದ್ಧಲಿಂಗಯತಿಗಳಂತೆ ಅವರ ಶಿಷ್ಯರು ಇಷ್ಟಲಿಂಗದ ಬಗೆಗೆ, ಅದರ ಮಹಾತ್ಮೆಯ ಬಗ್ಗೆ ಕೊಂಡಾಡುತ್ತಾರೆ.

"ಮಂಗಳಾತ್ಮಕ ಪರಮಲಿಂಗವ ತ್ರಿ
ಕಾಲದೊಳು ಹಿಂಗದರ್ಚಿಪುದು"

ಎಂದೇಳುತ್ತಾ ಲಿಂಗವೇ, ಭಕ್ತನ ಯುಕ್ತಿ-ಶಕ್ತಿ-ಮುಕ್ತಿ ದೊರಕುವಂತೆ ಮಾಡಿದೆ ಎನ್ನುತ್ತಾರೆ. ಜಿಗುನಿ ಮರುಳದೇವನಲ್ಲಿ ಸಾಮಾಜಿಕ ಚಿಂತನೆಯ ಗೀತೆಗಳು ಕಂಡುಬರುವುದಿಲ್ಲ. ಬದಲಾಗಿ ಭಕ್ತ, ಭಕ್ತಿಯಿಲ್ಲದ ಅಜ್ಞಾನಿಗಳ ಬಗೆಗಿನ ಕೆಲ ಟೀಕೆಯ ಸ್ವರವಚನಗಳು ಕಂಡುಬರುತ್ತವೆ.

ವೀರಶೈವರಲ್ಲಿ ಜಂಗಮನನ್ನು ಜಂಗಮ ತತ್ವವನ್ನು ಲಿಂಗಕ್ಕಿಂತ ಅಧಿಕವೆಂದು ಪರಿಗಣಿಸುತ್ತಾರೆ. ಒಳ್ಳೆಯ ಭಕ್ತಿ ಹಾಗೂ ಶಿವನ ರೂಪವೇ ಮಹಾಜಂಗಮ ಎಂದು ಜಂಗಮ ಮಹತ್ವ ಕೊಂಡಾಡುವ ಅನೇಕ ಗೀತೆಗಳು ಈ

ಕಾಲಘಟ್ಟದಲ್ಲಿ ಕಾಣಸಿಗುತ್ತವೆ. ಜಂಗಮನ ಬಗೆಗೆ ವರ್ಣಿಸುವ ಜಿಗುನಿ ಮರುಳದೇವರ ಈ ಗೀತೆಯನ್ನು ನೋಡಬಹುದು.

ಚರಲಿಂಗ ಸುಪ್ರಸಾದವೆ ಲಿಂಗಕರ್ಪಿತವು
ಚರಣಜಲವೆ ಲಿಂಗಕಭಿಷೇಕ (ಅದೇ, ಪು. ೧೩೫)

ಈ ಹಾಡಿನಲ್ಲಿ ಜಂಗಮಕ್ಕೆ ಇಟ್ಟ ಪ್ರಸಾದವನ್ನು ಲಿಂಗಕ್ಕೆ ಇಡಬಹುದೇ ಎನ್ನುವುದಕ್ಕೆ ಉತ್ತರವೆಂಬಂತೆ ಜೀವಂತ ಲಿಂಗವಾದ ಜಂಗಮಕ್ಕೆ ಪ್ರಸಾದ ಅರ್ಪಿಸಿದ ಮೇಲೆ ಲಿಂಗಕ್ಕೆ ಅರ್ಪಿಸಿದಂತೆಯೇ ಎಂದು ಹೇಳುತ್ತಾರೆ. ಹಾಗೆಯೇ ಗುರುಮಹಿಮೆಯ, ಭಕ್ತನ ಮನಸ್ಥಿತಿಯ ಬಗೆಗಿನ ವಸ್ತುವಾಗುಳ್ಳ ಹಾಡುಗಳು ಅಧಿಕವಾಗಿ ಈ ಕಾಲದಲ್ಲಿ ಸಿಕ್ಕುತ್ತವೆ.

ಸಂಸಾರದ ಅಶಾಶ್ವತೆಯನ್ನು ಅರಿತು ಅಧ್ಯಾತ್ಮದ ಕಡೆಗೆ ಮನಸ್ಸು ಒಲಿಯುವಂತೆ, ಭಕ್ತನ ಮನಸ್ಸಿನ ಹೊಯ್ದಾಟವನ್ನು ತಪ್ಪಿಸಿ ಶಿವನ ಸಾನ್ನಿಧ್ಯಕ್ಕೆ ಹತ್ತಿರವಾಗುವಿಕೆಯನ್ನು ಬಸವಾದಿ ಸ್ವರವಚನಕಾರರು ನಿರೂಪಿಸುತ್ತಾರೆ. ಶಂಕರದೇವರು ತಮ್ಮ ಸಾಧನೆಯ ಪಥದಲ್ಲಿ ಎದುರಾಗುವ ಸಂಸಾರಿಕ ಜಂಜಾಟಗಳಿಂದ ಮುಕ್ತಿಯನ್ನು ಲಿಂಗದೊಡನೆ ಬೆರೆತು ಗೆಲ್ಲಬಹುದೆಂದು, ಈ ದೇಹವೆಲ್ಲ ನಶ್ವರ, ಎಂದಿದ್ದರೂ ಇದರ ಅಂತ್ಯವಿದ್ದೆ ಇದೆ. ಇದಕ್ಕೆಲ್ಲ ಆಸೆ ಆಮಿಷವೇಕೆ ಎನ್ನುವುದನ್ನು

"ಮೊನ್ನೆ ಮದುವೆಯಾದೆ ಕಚಿವರೊಂದೆಮ್ಮೆಯ
ನಿನ್ನೆ ಕೊಂಡೆನು ನಾಳೆ ಬೆಳೆಬಹುದು
ನನ್ನ ಮನೆಯ ಹಬ್ಬ ನಾನಿಂದು ಬಾರೆನೆಂ
ದೆನ್ನಲಂಕಕನ ದೂತರು ಬಿಡರಣ್ಣ"

ಎಂದು ವಿವರಿಸುತ್ತಾನೆ. ಶರಣಸತಿ ಲಿಂಗಪತಿ ಭಾವದ ವಸ್ತುವುಳ್ಳ ಕೆಲ ಹಾಡುಗಳು ಈ ಯುಗದಲ್ಲಿ ಗೋಚರಿಸುತ್ತವೆ. ಮರುಳದೇವನ ಈ ಹಾಡಿನಲ್ಲಿ

"ಇನ್ನೇನ ಮಾಡವೆನಕ್ಕ ಎನ್ನ ಮನೋರಮಣಗೆ
ಕನ್ನೆಯುಂದಿಗೊಡಗೂಡಿ ಇನ್ನು ಸಮ್ಮನಿಹುದೇನೆ?"[೮]
ಎಲೆನಲ್ಲನೆ ನಿನ್ನ ಕಲೆಯನರಿದು ಮನ
ಒಲಿದು ಕೂಡಿದಳ ನೆನ್ನ ನಗಲಿ ಮಿಕ್ಕು
ತೊಲಗಲು ಚಿತವೆ ನೀನು ಸಲ್ಲದುವಲ್ಲ (ಅದೇ. ಪು.೧೨೧)

ಹನ್ನೆರಡನೆಯ ಶತಮಾನದ ಶಿವಶರಣರನ್ನು ಬಿಟ್ಟರೆ ವೀರಶೈವ ವಾಗ್ಗೇಯಕಾರರಲ್ಲಿ ನಿಜಗುಣ ಶಿವಯೋಗಿಗಳು, ಅಗ್ರಗಣ್ಯರೆನ್ನಬಹುದು. ಬಸವಣ್ಣನದು ಭಕ್ತಿಮಾರ್ಗವಾಗಿ ಅವರು ಹಾಡುಗಳು ಕಂಡುಬಂದರೆ ನಿಜಗುಣ ಶಿವಯೋಗಿಗಳು ಜ್ಞಾನಮಾರ್ಗದ ಕಡೆಗೆ ಒಲವಿಟ್ಟಿಸಿ ಭಕ್ತಿಗಿಂತ ಜ್ಞಾನಮಾರ್ಗಕ್ಕೆ ಸಂಬಂಧಿಸಿದ

ಹಾಡುಗಳನ್ನು ಸಂಗೀತ ಪ್ರಧಾನವಾಗಿ ರಚಿಸಿದ್ದಾರೆ. ಇವರ 'ಕೈವಲ್ಯ ಪದ್ಧತಿ' ಕೃತಿಯು ಸ್ವರವಚನಗಳ ಸರಮಾಲೆಯಾಗಿದೆ. "ಆರು ನಾನೆಂದು ವಿಚಾರಿಸಿ ತಿಳಿಯೆ ಸಂಸಾರ ಸಾಗರವನುತ್ತರಿಪುದರಿದೆ ಎಂಬುದು ಇವರ ಧ್ಯೇಯವಾಕ್ಯ."[೬]

ನಿಜಗುಣರು ವ್ಯಕ್ತಿ ಸಾಧನೆಗೆ ಹೆಚ್ಚಿನ ಒತ್ತು ನೀಡಿದರು. ಲೌಕಿಕ ಜಗತ್ತಿಗಿಂತ ಆತ್ಮಜ್ಞಾನಕ್ಕೆ ಅವರು ನೀಡಿದ ಪ್ರಾಶಸ್ತ್ಯ ಅವರ ಹಾಡುಗಳಲ್ಲಿ ಜೀವನಾಡಿಯಾಗಿವೆ. ಸಾಮಾನ್ಯರು ಆಧ್ಯಾತ್ಮದ ತತ್ವ ತಿಳಿಯಬೇಕಾದರೆ ವೈರಾಗ್ಯದ ಮನಸ್ಸು ಮಾಡಬೇಕು. ಅದು ಕಷ್ಟ ಸಾಧ್ಯ. ಅದಕ್ಕಾಗಿ ನಿಜಗುಣರು ಶ್ರೀಸಾಮಾನ್ಯರು ಸುಲಭವಾಗಿ ಜ್ಞಾನಿಗಳಾಗಿ ಬದುಕನ್ನು ಸಾರ್ಥಕಪಡಿಸಿಕೊಳ್ಳುವುದು ಹೇಗೆಂಬುದನ್ನು ತಮ್ಮ ಹಾಡುಗಳ ಮೂಲಕ ಚಿತ್ರಿಸಿದ್ದಾರೆ. ಅವರ 'ಕೈವಲ್ಯ ಪದ್ಧತಿ'ಯ ಈ ಹಾಡಿನ ಮೂಲಕ ಅದನ್ನು ಮನಗಾಣಬಹುದು.

"ತನುವ ದಂಡಿಸಬೇಡ ಮನವ ನಿಲ್ಲಿಸಬೇಡ
ಧನವ ನೀಗಿರಬೇಡ ಮನೆಮಾರು ತೊರೆದು
ವನವಾಸ ಬೇಡ ನಿನಗನಿತು ತತ್ವಜ್ಞಾನ
ಸಂಜನಿಸಲಘುವೆಲ್ಲವನು ಕೆಡಿಸುವುದಂದೆ?"

ಭಕ್ತನು ಶಿವಯೋಗದ ಪರಧಿಯ ಹೇಗಿರುತ್ತರೆಂಬುದನ್ನು ಆಧ್ಯಾತ್ಮದ ಹಿನ್ನೆಲೆಯಲ್ಲಿ ಅದರ ಮಹಿಮಾತೀತ ಅನುಭಾವವು ಶಿವನಲ್ಲಿ ಲೀನವಾಗುವುದರ ಮೂಲಕ ಲಭಿಸುತ್ತದೆಂಬುದನ್ನು:

**ನಿರ್ಭಾವಾಗಮ** **ರಾಗ : ನಾಟಿ**

"ಹೂವಿಲ್ಲದ ಕಂಪು, ಹೊನ್ನಿಲ್ಲದ ಬಣ್ಣ
ಕಳೆಯಿಲ್ಲದ ಚಂದ್ರನ ಪರಿಯಂತೆ ಶಿವಯೋಗ ‖ ಪ ‖

ಕಾಲಿಲ್ಲದ ನಡೆ, ಕಣ್ಣಿಲ್ಲದ ನೋಟ
ಹಾಲಿಲ್ಲದ ತುಪ್ಪದ 'ಪರಿ'ನೋಡ!
ನಾಲಿಗೆಯಿಲ್ಲದ ರುಚಿ, ಕಿವಿಯಲ್ಲಿ
ಕೇಳದೆ ಹೇಳುವ 'ಪರಿ ಶಿವಯೋಗ'!" (ಶಿ.ಗೀ. ಪು.೨೩೩)

ಮೇಲಿನ ಉದಾಹರಣೆಗಳೆಲ್ಲ ಕಲ್ಪನಾತೀತ. ಆದರೂ ಅದರಲ್ಲೊಂದು ನಮಗರಿಯದ ವಿಶೇಷಾನುಭವ. ಶಿವಯೋಗ ಸಾನಿತ್ಯವೆನ್ನುವುದು ಹೇಗಿರುತ್ತದೆಂಬುದನ್ನು ಸುಂದರ ಉಪಮೆಗಳ ಮೂಲಕ ಈ ಹಾಡಿನಲ್ಲಿ ವಿವರಿಸಿದ್ದಾರೆ.

'ಶಿವಪಥವನು ಅರಿವಡೆ ಗುರುಪಥವೆ ಮೊದಲು' ಬಂದೇಳವ ಬಸವಣ್ಣನ ಪ್ರಕಾರ ಶಿವನ ಧಾರಿಯನ್ನು ಅರಿಯಬೇಕಾದರೆ ಅದಕ್ಕೆ ಮಾರ್ಗದರ್ಶಕರಾಗಿ ಗುರುಪಥವನ್ನು ಮೊದಲು ಕಂಡು ಅವರ ಮೂಲಕ ಶಿವಪಥ ಕಂಡುಕೊಳ್ಳಬೇಕೆನ್ನುತ್ತಾರೆ. ಅದರಂತೇ ನಿಜಗುಣರು ಸಹ 'ಶ್ರೀಗುರು ವಚನೋಪದೇಶ'ವೆಂಬ ಹಾಡಿನಲ್ಲಿ ಭಕ್ತನು

ಮುಕ್ತಿಯನ್ನು ಪಡೆದುಕೊಳ್ಳಲು ಗುರುವಿನ ಉಪದೇಶದಿಂದ ಮಾತ್ರ ಸಾಧ್ಯವೆಂದು, ಗುರು ಮಹಾತ್ಮೆಯ ವಸ್ತುವುಳ್ಳ ಈ ಗೀತೆಯನ್ನು ಹಾಡಿದ್ದಾರೆ.

ರಾಗ : ನಾದರಾಮಕ್ರಿಯೆ

"ಶ್ರೀಗುರು ವಚನೋಪದೇಶವನಾಲಿಸಿ
ದಾಗಳಹುದು ನರರಿಗೆ ಮುಕುತಿ || ಪ ||

"ದುರಿತ ಕರ್ಮವನೊಲ್ಲದಿರು, ಪುಣ್ಯವನೆ ಮಾಡು
ಹರನಡಿವಿಡಿ, ಶಾಂತರೊಡನಾಡು
ಕರುಣವಿರಲಿ ಜೀವರೊಳು, ನೀತಿವಿದನಾಗು
ಪೊರೆಪೊರ್ದಿದರನೆಂದು ಬೇಸಸುವ" (ಕೈವಲ್ಯ ಪದ್ಧತಿ, ಪ್ರದೀಪಿಕೆ, ಪದ, ೧೯೬)

ಎಂದಾಡಿದ್ದಾರೆ. ಹೀಗೆ ಗುರು, ಆಧ್ಯಾತ್ಮದ ವಸ್ತುವುಳ್ಳ ಸಾಂಕೇತಿಕವಾಗಿ ಸ್ವರಗೀತೆಗಳ ಜೊತೆಗೆ ಆತ್ಮನಿವೇದನೆ ಗೀತೆಗಳನ್ನು ರಚಿಸಿದ್ದಾರೆ. ಕೋಗಿಲೆಯನ್ನು ಸಾಂಕೇತಿಕವಾಗಿ ಬಳಸಿ ನಿದನೆಗೆ ದುಷ್ಟನಾದ ಮನ್ಮಥನನ್ನು ತ್ಯಜಿಸಿ ಶಿವನ ಪ್ರಾರ್ಥಿಸುವಿಕೆಯನ್ನು ಅತ್ಯಂತ ಕಲಾತ್ಮಕವಾಗಿ ಕಟ್ಟಿಕೊಟ್ಟಿದ್ದಾರೆ.

ಪದ ೮ ರಾಗ : ಸೌರಾಷ್ಟ್ರ

ಕೋಗಿಲೆ ಚೆಲ್ವ ಕೋಗಿಲೆ ಮುದ್ದು
ಕೋಗಿಲೆ ಜಾಣ ಕೋಗಿಲೆ || ಪ ||

ಮನುಮುನಿಗಳ ನೀತಿಯನು ಕೆಡಿಸುವ ದುಷ್ಟ
ಮನನಜನನು ಮೀರಿ ಕೋಗಿಲೆ
ಘನಪದವನು ತನ್ನ ನೆನೆವರಿಗೊಲಿದೀವ
ಧನದ ಮಿತ್ರನ ಸಾರು ಕೋಗಿಲೆ (ಕೈವಲ್ಯ ಪದ್ಧತಿ)

ಅತೀ ಜನಪ್ರಿಯವಾದ ಈ ಹಾಡಿನಲ್ಲಿ ಮನುಷ್ಯನಿಗೆ ಅಗತ್ಯವಾದ ಉತ್ತಮ ದರ್ಶನವನ್ನು ಆತ್ಮದ ನೆಲೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಇಲ್ಲಿಯ ಪ್ರತಿಯೊಂದು ಪದ್ಯ ಒಂದೊಂದು ಆಯ್ಕೆ ಸೂಚಿಸುತ್ತದೆ. ಕಾಮ ನಿಯಂತ್ರಣ, ಚಂಚಲತೆಯ ದಮನ, ಆ ಮೂಲಕ ಆಗುವ ಜೀವಾತ್ಮನ ಪಕ್ವತೆ ಪದ್ಯದ ಪ್ರಮುಖ ಆಶಯವಾಗಿದೆ. ಹೀಗೆ ಈ ಯುಗದಲ್ಲಿ ರಚಿತವಾಗಿರುವ ಸ್ವರವಚನಗಳು ಹೆಚ್ಚಾಗಿ ಸಮಾಜಮುಖಿಗಿಂತ ಆತ್ಮೋದ್ಧಾರ, ವ್ಯಕ್ತಿಗತ ನೆಲೆಯ ಮೂಲಕ ಸಾಮಾಜಿಕ ಬದಲಾವಣೆ ಬಯಸಿರುವುದು ಕಂಡುಬರುತ್ತದೆ. ಷಡಕ್ಷರಿ ದೇವನ ಈ ಹಾಡು

"ಡಿಂಭದೊಳಗೆ ಒಂದು ಪ್ರಾಣ
ಕಂಭ ಸೂತ್ರ ಬೊಂಬೆಯಂತೆ
ಎಂದಿಗಾದರೊಂದು ದಿನವು ಸಾವು ತಪ್ಪದು || ಪ ||

ಹುಟ್ಟುತೇನು ತರಲು ಇಲ್ಲ
ಹೋಗುತೇನು ಒಯ್ಯಲಿಲ್ಲ
ಸುಟ್ಟುಸುಣ್ಣದ್ದರಳಿನಂತೆ ಆಯಿತು ದೇಹ

ಹತ್ತು ಎಂಟು ಲಕ್ಷ ಗಳಿಸಿ
ಮತ್ತೆ ಸಾಲದೆಂದು ಪರರ
ಸೊತ್ತಿಗಾಗಿ ಆಸೆ ಮಾಡಿ ನ್ಯಾಯ ಮಾಡುವ

ಈ ಹಾಡಿನಲ್ಲಿ ಷಡಕ್ಷರದೇವ ಇಹಲೋಕ ವ್ಯಾಮೋಹವನ್ನು ತೊರೆದು ಆತ್ಮೋದ್ಧಾರದ ಕಡೆಗೆ ಮನಸ್ಸನ್ನು ಪರಿವರ್ತಿಸುವ ಸಂದೇಶವಿತ್ತಿದ್ದಾನೆ. ಬದುಕಿನಲ್ಲಿ ಸತ್ಯವಂತನಾಗಿ ಬಾಳಬೇಕು. ಅದರ ಬದಲಾಗಿ ಭೋಗಿಯಾಗಿ, ಸ್ವಾರ್ಥಿಯಾಗಿ ಬದುಕಿ ಸಾಧಿಸುವುದಾದರು ಏನು, ಸತ್ತನಂತರ ನಮ್ಮಿಂದೆ ಏನು ಬರುವುದಿಲ್ಲ, ಇರುವವರೆಗಾದರೂ ಸತ್ಯ ಪ್ರಮಾಣಿಕವಾಗಿ ಬದುಕು ಸಾಗಿಸುವಂತೆಯೂ ಅದು ಸತ್ತನಂತರ ಸಮಾಜದಲ್ಲಿ ಅವರಿವರು ಹಾಡಿ ಹೊಗಳುತ್ತಾರೆ ಎಂದು ಲೌಕಿಕ ಉದಾಹರಣೆಗಳೊಂದಿಗೆ ಸ್ಫುಟವಾಗಿ ಹಾಡಿದ್ದಾರೆ.

ಸರಳ ಸಜ್ಜನಿಕೆಯಿಂದ ಕೂಡಿದ ಮುಪ್ಪಿನ ಷಡಕ್ಷರಿಯ ಸರಳವಾದ ನುಡಿಗಳಲ್ಲಿ ಸ್ಫುಟವಾದ ಅರ್ಥವುಳ್ಳ ಗೀತೆಗಳನ್ನು ಸಮಾಜಕ್ಕೆ ನೀಡಿದ್ದಾರೆ. ನಿಜಗುಣ ಶಿವಯೋಗಿಗಳಂತೆ ಪಕ್ಷಿ-ಪ್ರಾಣಿ-ಪಕ್ಷಿಗಳ ಸಂಕೇತಗಳನ್ನು ಬಳಸಿ ಆತ್ಮನನ್ನು ಹುಡುಕುವ ಆಧ್ಯಾತ್ಮ ಗೀತೆಗಳು ಷಡಕ್ಷರಿ ದೇವನಲ್ಲಿ ಕಾಣಸಿಗುತ್ತವೆ.

“ಹಾರು ಕಂಡ್ಯಾ ಹಂಸ ಹಾರು ಕಂಡ್ಯಾ ನೀನು
ಮೂರು ಬಲೆಗಳೊಳಗೆ ಸಿಲುಕಿದೆ”[೯] ||ಪ| (ಸುಭೋಧ ಸಾರ ಪು. ೧೨೭)

ಹೀಗೆ ಸರಳವಾದ ಭಾಷೆಯನ್ನು ಒಳಗೊಂಡು ಮೌಲ್ಯಯುತ ಸಂದೇಶ ನೀಡುವ ಷಡಕ್ಷರಿದೇವನ ಹಾಡುಗಳ ಬಗ್ಗೆ ಸಿದ್ಧಯ ಪುರಾಣಿಕ ಅವರು ‘ಸುಬೋಧಸಾರ’ ಮುನ್ನುಡಿಯಲ್ಲಿ[೧೦] ತಾದಾತ್ಮ್ಯ, ತನ್ಮಯತೆ ವಿಕಳತೆ, ಮುಗ್ಧತ್ವ, ಸಮರಸಭಾವ, ಅನನ್ಯ ಶರಣತೆ, ವೈರಾಗ್ಯದ ಉಜ್ವಲತೆ, ಭಕ್ತಿಯ ಆವೇಶ, ಸಲುಗೆ ಇವೆ ಮುಪ್ಪಿನಾರ್ಯರ ಹಾಡುಗಳ ಹೆಗ್ಗುರುತು ಎಂದಿದ್ದಾರೆ.

ಉದಾತ್ತಭಾವದ, ವಿಶಾಲ ಹೃದಯದ, ದರ್ಶನ ಬುದ್ಧಿಯ, ಸಮನ್ವಯ ಗುಣಕ್ಕೆ ಸಾಕ್ಷಿ ಎಂಬಂತೆ ತತ್ವಭರಿತವೂ, ಭಾವೈಕ್ಯ ಪ್ರತೀಕವೂ ಅತ್ಯಂತ ಜನಪ್ರಿಯವೂ ಆದ ಷಡಕ್ಷರಿ ದೇವನ ಈ ಹಾಡು ಸಶಕ್ತವಾಗಿ ಮೂಡಿಬಂದಿದೆ.

ಅವರವರ ದರುಶನಕೆ ಅವರವರ ವೇಷದಲಿ
ಅವರವರಿಗೆಲ್ಲ ಗುರುವೂ ನೀನೊಬ್ಬನೆ
ಅವರವರ ಭಾವಕ್ಕೆ ಅವರವರ ಭಕ್ತಿಗೆ
ಅವರವರಿಗೆಲ್ಲ ದೇವ ನೀನೊಬ್ಬನೆ (ಸುಭೋಧಸಾರ, ಪು. ೧೧)

ನೀತಿ ಪ್ರಧಾನವಾದ ಕೆಲ ಸ್ವರವಚನಗಳು 'ಕೆಸ್ತೂರ ದೇವರ' ಹಾಡುಗಳಲ್ಲಿ ಕಾಣಸಿಗುತ್ತವೆ.

"ಹಿತವ ಮಾಳ್ಪಂಗತಿ ಹಿತವಂ ವರಿತ ನುತ್ತಮನು
ಗಿತಮಾತೆಯರ ಬೈವ ಸುತನಧಮನು
ಅತಿಹಸಿದು ಬಂದವರ ಸತ್ಕರಿಸ ಉತ್ತಮನು
ಮತಿಗೆಟ್ಟು ಪರತಿಗೆಳಸುವನಧಮ"

ಹಿತವೆನ್ನು ಮಾಡಿದವರಿಗೆ ಹಿತ ಬಯಸುವವನು ಉತ್ತಮನು, ತಂದೆ ತಾಯಿಗಳನ್ನು ಬೈವ ಮಗ ಅಧಮನು. ಹಸಿದು ಬಂದವರಿಗೆ ಉಣ್ಣಲು ಇಟ್ಟು ಸತ್ಕರಿಸುವವನು ಉತ್ತಮರಲ್ಲಿ ಉತ್ತಮನು. ಬುದ್ಧಿ ಕೆಟ್ಟು ಬೇರೊಬ್ಬರ ಸತಿಯನ್ನು ಗೆಳೆತನ ಮಾಡಬಯಸುವವನು ಅಧಮನೆಂದು ನೀತಿಯನ್ನೇ ಪ್ರಧಾನ ವಸ್ತುವಾಗಿಟ್ಟುಕೊಂಡು ಹಾಡಿದ್ದಾರೆ.

ಮುಂದೆ ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಕಾಣಬರುವ ಶ್ರೇಷ್ಠ ಅನುಭಾವಿ ಸರ್ಪಭೂಷಣ ಶಿವಯೋಗಿಗಳು, 'ಕೈವಲ್ಯ ಕಲ್ಪವಲ್ಲರಿ'ಯೂ ನಿಜಗುಣರ ಕೈವಲ್ಯ ಪದ್ಧತಿಯಂತೆ ಅನುಭಾವ ಗೀತೆಗಳ ಸಂಕಲನವಾಗಿದೆ. ಸರ್ಪಭೂಷಣ ಶಿವಯೋಗಿಗಳು ಶಬ್ದಾರ್ಥ ಕಲೆಯ ಜಾಣರಾಗಿದ್ದರೆಂಬುದನ್ನು ಅವರ ಸ್ವರಗೀತೆಗಳು ಸ್ಪುಟಗೊಳಿಸುತ್ತವೆ. ಇವರು ತಾತ್ವಿಕ ವಿಚಾರಗಳನ್ನು ಹೇಳುವಾಗ ಲೌಕಿಕ ಜಗತ್ತಿನ ವ್ಯವಹಾರಿಕ ದೃಷ್ಟಾಂತಗಳನ್ನು ನೀಡಿ ಮನಸ್ಸಿಗೆ ಮುಟ್ಟಿಸುವಂತೆ ಚಿಂತನ ಲಹರಿಗಳು ಗೀತೆಯಲ್ಲಿ ಹರಿದುಬಂದಿವೆ.

"ಶರೀರವೆಂದೆಂಬುವ ಹೊಲನ ಹಸವ ಮಾಡಿ
ಪರತತ್ವ ಬೆಳೆಯನೆ ಬೆಳೆದುಣ್ಣಿರೊ"[೧೧]

ಮನವೆಂಬ ಹೊಲವನ್ನು ಹಸನು ಮಾಡಿ, ಸದ್ಭಾವದ ಬೀಜವನ್ನು ಬಿತ್ತಿ ಮುಕ್ತಿಯನ್ನು ಪಡೆದುಕೊಳ್ಳ ಬೇಕೆಂಬುದನ್ನು ರೈತರು ಹೊಲ ಉಳುವುದಕ್ಕೆ ಸಂಬಂಧಿಸಿದ ದೃಷ್ಟಾಂತವನ್ನು ನೀಡಿ, ದೇಹದ ಅವಗುಣಗಳ ನೀಗಿಸಿಕೊಂಡು ಶಿವಗುಣಗಳನ್ನು ಬೆಳೆಸಿಕೊಳ್ಳುವ ರೀತಿಯನ್ನು ತಿಳಿಸುತ್ತಾರೆ. ಸರ್ಪಭೂಷಣ ಶಿವಯೋಗಿಯವರ ಈ ಬಗೆಗಿನ ಅನೇಕ ಹಾಡುಗಳು ಜನರ ಬಾಯಲ್ಲಿ ರಾಗವಾಗಿ ಹೊಮ್ಮುತ್ತವೆ. ಇದಕ್ಕೆ ಕಾರಣ ಅವುಗಳಲ್ಲಿ ಇರುವ ಸರಳತೆ ಮತ್ತು ಆತ್ಮೀಯತೆ ಎನ್ನಬಹುದು.

ಸರಳವೂ ಸಹಜವೂ ಆದ ಮೇಲಿನ ಪದ್ಯದ ರೀತಿ ಮತ್ತೊಂದು ಹಾಡಿನಲ್ಲಿ ಗಮಸಬಹುದು.

"ಅನುಭವದಡಿಗೆಯ ಮೂಡಿ ಆದ
ಕ್ಕನುಭವಿಗಳು ಬಂದು ನೀವೆಲ್ಲ ಕೂಡಿ || ಪ ||

ತನುವೆಂಬ ಭಾಂಡವ ತೊಳೆದು ಕೆಟ್ಟ
ಮನವ ಜಂಜಡವೆಂಬ ಮುಸುರೆಯ ಕಳೆದು

ಘನವೆಂಬ ಮನೆಯನು ಬಳಿದು ಅಲ್ಲಿ

ಬಿನುಗು ತ್ರಿಗುಣವೆಂಬವೊಲೆಗುಂಡು ತೊಳೆದು”

ಮನದ ಮೈಲಿಗೆಯ ಕಳೆದು ಸತ್ಯ, ಶುದ್ಧವಾದ ಮನಸ್ಸನ್ನು ಹೊಂದಿ, ಗುರುಸಿದ್ಧದೇವನ ಭಜಿಸಬೇಕೆಂಬುದನ್ನು ಈ ಹಾಡಿನಲ್ಲಿ ಪ್ರಸ್ತುತಪಡಿಸಿದ್ದಾರೆ. ಈ ಬಗೆಯ ಲೌಕಿಕ ದೃಷ್ಟಾಂತಗಳೊನ್ನೊಳಗೊಂಡ ಜನಬಳಕೆಯ ಮಾತುಗಳನ್ನು ಅನುಭವ ಮಾಧ್ಯಮವಾಗಿ ಬಳಸಿಕೊಂಡಿರುವಿಕೆಯೂ ಮುಂದೆ ಕಡಕೋಳ ಮಡಿವಾಳಪ್ಪನವರ ಸಮಕಾಲೀನ ವಾಗ್ಗೇಯಕಾರರಲ್ಲಿ ಕಂಡುಬರುತ್ತವೆ. ಹತ್ತೊಂಬತ್ತನೆಯ ಶತಮಾನದ ಆದಿಯ ಮಧ್ಯಭಾಗದಲ್ಲಿ ಕಂಡುಬರುವ ಇನ್ನೋರ್ವ ಅನುಭಾವಿ ಮಡಿವಾಳಪ್ಪನವರು. ತಮಗಾದ ಅನಂತ ಅನುಭವಗಳನ್ನು ಜನಸಾಮಾನ್ಯರಿಗೂ ಅರ್ಥವಾಗುವಂತೆ ಹೇಳಿ ಅವರ ಬಾಳನ್ನು ತಿದ್ದುವ ಪ್ರಯತ್ನ ಮಾಡಿದ್ದಾರೆ. ಗ್ರಾಮ್ಯ ಭಾಷೆಯಿಂದ ಕೂಡಿದ ಪದಗಳು ಕೇಳುವಿಕೆ ರಮ್ಯವಾಗಿವೆ. ಅವರ ಹಾಡುಗಳಲ್ಲಿರುವುದು ಲೋಕನೀತಿ. ವ್ಯಕ್ತಿ, ಸಮಾಜ, ಧರ್ಮ ಒಟ್ಟಾರೆ ಲೋಕ ಕಲ್ಯಾಣದ ಬಗೆಗಿನ ಹಾಡುಗಳೇ ಅಧಿಕ.

“ಬಾಯಿಲೊಂದು ಆಡ್ತೀರಿ ಮನಸಿನಾಗೊಂದು ಮಾಡುತೀರಿ

ಬರದಿಟ್ಟಿದೋದಿಕೊಂಡು ಬಾತಿಗೆ ಬಾರದ್ಹೋಗುತೀರಿ”

ಇಲ್ಲಿ ಕಟುವಾಗಿ ಸಮಾಜವನ್ನು ಟೀಕಿಸುತ್ತಾರೆ. ಬಿಸಮಿಲ್ಲಾ ಹೇಳುವ ಮುಸಲ್ಮಾನರು, ನೀರಲ್ಲಿ ಮುಳುಮುಳುಗಿ ಏಳುವ ಬ್ರಾಹ್ಮಣರು, ಸೋಹಂ ಎಂದು ಭಜಿಸಿ ಅಡ್ಡಗುದ್ದಿಗೆ ಆಸೆ ಪಡುವ ಸಾಧುಸಂತರು, ಪಾರಮಾರ್ಥದ ಗಂಧವಿಲ್ಲದೆ ಪರನಾರಿಯರ ಸಂಗಕ್ಕೆಳಸುವ ಪಟ್ಟದ ಚರಮೂರ್ತಿಗಳು ಎಲ್ಲರೂ ಅವರ ಟೀಕೆಗೆ ಒಳಗಾಗಿದ್ದಾರೆ.

ಕಡಲೂರು ಬಸವಲಿಂಗರು ಒಮ್ಮೆ ಮಡಿವಾಳಪ್ಪನವರ ಹತ್ತಿರ ಬಂದು ಹಣ ಎಷ್ಟು ಗಳಿಸಿದರು ಸಾಲಲೊಲ್ಲದು, ಶ್ರೀಮಂತನಾಗಲೂ ಏನು ಮಾಡಬೇಕೆಂಬುದಕ್ಕೆ ಉತ್ತರವಾಗಿ, ಧನವಗಳಿಸಬೇಕು ಎಂಬ ಹಾಡಿನಲ್ಲಿ ಯಾವ ಬಗೆಯ ಧನ ಗಳಿಸಬೇಕೆಂಬುದನ್ನು ಮಾರ್ಮಿಕವಾಗಿ ಹೀಗೆ ಹಾಡಿದ್ದಾರೆ.

“ಧನವ ಗಳಿಸಬೇಕು ಇಂಥದ್ದು ಈ

ಜನರಿಗೆ ತಿಳಿಯದಂಥಾದ್ದು

ಅನುದಿನ ಅಜಹರಿ ಮನು ಮುನಿಗಳಿಗೆಲ್ಲ

ಹೌದು ಹೌದು ಹೌದೆಂಬಂಥಾದ್ದು ॥ ಪ ॥

ಕೊಟ್ಟರೆ ಹೋಗದಂಥಾದ್ದು ಅದು

ಇಟ್ಟರೆ ಹೋಗದಂಥಾದ್ದು

ಕಟ್ಟಿದ ಗಂಟು ಬೈಲೊಳಗಿಟ್ಟರೆ

ಮುಟ್ಟಲು ಬಾರದಥಾದ್ದು” (ಕಡಕೋಳ ಮಡಿವಾಳೇಶ್ವರ ಸ್ವರವಚನ, ಪು.೧೦)

ಈ ಪದ್ಯದಲ್ಲಿ ಬಸವಲಿಂಗ ಶರಣರಿಗೆ ಹೇಳುವ ಪರಿಯಲ್ಲಿ ಹಿಡಿಲೋಕಕ್ಕೆ ಯಾರು ಮುಟ್ಟದ, ಕದಿಯದ, ಕಾಮದ, ಎಷ್ಟು ಬಳಿಸಿದರು ಸವೆಯದ ಧನವಾದ ಮನೆತನ ಉದ್ಯೋಗವನ್ನೇ ಸರಿಯಾಗಿ ನಡೆಸಿಕೊಂಡೋಗಬೇಕೆಂಬ ಸಂದೇಶವನ್ನು ನೀಡಿದ್ದಾರೆ. ಮನೆತನದ ಉದ್ಯೋಗವೆಂಬ ಧನವನ್ನು ಗಳಿಸೋಣ.

ಹೀಗೆ ಬಸವಾದಿ ಶರಣರಾದಿಯಾಗಿ ರಚಿತಗೊಂಡ ಹಾಡಿನ ಪರಂಪರೆಯು ಶರಣರಲ್ಲಿ ಕಿರುದೊರೆಯಾಗಿ ಆರಂಭಗೊಂಡು, ನೂರೊಂದು ವಿರಕ್ತರ ಕಾಲಕ್ಕೆ ಹೆದ್ದೊರೆಯಾಗಿ, ನಿಜಗುಣಾದಿ ಶರಣರ ಕಾಲಕ್ಕೆ ಮಹಾಪೂರವಾಗಿ ಮುಂದುವರೆದು ಇಂದಿನವರೆಗೂ ಹರಿದುಕೊಂಡು ಬಂದಿದೆ. ಆರಂಭದಲ್ಲಿ ವೀರಶೈವ ತತ್ತ್ವ ಚಿಂತನೆಗಳನ್ನು ವಸ್ತುವಾಗುಳ್ಳ ಸ್ವರವಚನಗಳು ಬೆಡಗಿನ ರೂಪದಲ್ಲಿದ್ದು ಷಟ್‌ಸ್ಥಲ, ಅಷ್ಟಾವರಣ, ಪಂಚಚಾರದ ಒಲವುಗಳನ್ನು ವಸ್ತುವನ್ನಾಗಿಸಿ ಹೊಂದಿವೆ. ಗುರು, ಲಿಂಗ, ಜಂಗಮಕ್ಕೆ ಸಂಬಂಧಿಸಿದ ಹಾಡುಗಳೇ ಅಧಿಕವಾಗಿ ಕಾಣಸಿಗುತ್ತವೆ. ಎಲ್. ಬಸವರಾಜು ಅವರ ಶಿವದಾಸ ಗೀತಾಂಜಲಿಯಲ್ಲಿ ೨೪೦ಕಕ್ಕೂ ಅಧಿಕ ಗೀತೆಗಳಲ್ಲಿ ಬಸವಾದಿ ಶರಣರ ಆದಿಯಾಗಿ ಅಮುಗಿದೇವಯ್ಯನ ವರೆಗಿನ ಸ್ವರವಚನಗಳನ್ನು ಸಂಕಲಿಸಿದ್ದಾರೆ. ಈ ಎಲ್ಲ ಸ್ವರಗೀತೆಗಳ ಪ್ರಧಾನವಸ್ತು ವೀರಶೈವ ತತ್ತ್ವ ಚಿಂತನೆಯೇ. ಬಸವಾದಿ ಶರಣರ ನಂತರ ಅಂದರೆ ಮಧ್ಯಕಾಲೀನದ ತರುವಾಯ ಕೆಲ ವಾಗ್ಗೇಯಕಾರರಲ್ಲಿ ಲೋಕನೀತಿ, ಸಾಮಾಜಿಕ ವಿಢಂಬನೆಯತಹ ವಸ್ತುವು ಇರುವುದು ಕಾಣಸಿಗುತ್ತದೆ.

ಬಸವಾದಿ ಶರಣ ಹಾಡುಗಳು ಎಷ್ಟು ಸಡಿಲವೋ ಅಷ್ಟೆ ಸಡಿಲವೋ ಅಷ್ಟೆ ಗಹನ ಗಂಭೀರ್ಯದಿಂದ ಕೂಡಿದವುಗಳು. ಇಲ್ಲಿ ಬಸವಾದಿ ಶರಣರಿಗೆ ಪ್ರಸ್ತುತದಲ್ಲಿ ತಮ್ಮ ಧರ್ಮ ಪ್ರತಿಪಾದನೆಯೇ ಮುಖ್ಯವಾದುದರಿಂದ ಲೋಕಕಲ್ಯಾಣಕ್ಕಿಂತ ವೀರಶೈವ ತತ್ವಚಿಂತನೆಗಳ ಹಾಡುಗಳೇ ಅಧಿಕವಾಗಿ ಕಾಣಸಿಗುತ್ತವೆ. ಅದೇ ಕಾಲಘಟ್ಟದಲ್ಲಿ ಬಂದ ಅಕ್ಕಮಹಾದೇವಿಯಕ್ಕನಲ್ಲಿ ಶರಣಸತಿ ಲಿಂಗಪತಿಭಾವವುಳ್ಳ ಹಾಡುಗಳು ಕಾಣಸಿಗುತ್ತವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಹಾಡುಗಳ ಭಾಷೆ, ರೂಪ ವಿನ್ಯಾಸದಲ್ಲಿ ಕೆಲ ಬೆಡಗಿನ ರೂಪದಲ್ಲಿ ರಚಿತಗೊಂಡಿದ್ದರೆ, ಕೆಲವು ಸರಳತೆಯಿಂದೊಡಗೂಡಿ ಅರ್ಥದೃಷ್ಟಿಯಿಂದ ಮಹತ್ವದಿಂದ ಕೂಡಿಕೊಂಡಿವೆ. ಜ್ಞಾನಮಾರ್ಗಕ್ಕಿಂತ ಭಕ್ತಿ ಮಾರ್ಗವು ಈ ಕಾಲಘಟ್ಟದ ಸ್ವರವಚನಗಳ ವಸ್ತುವಾಗಿ ಕಂಡುಬರುತ್ತದೆ. ನಂತರದಲ್ಲಿ ಬಂದ ನೂರೊಂದು ವಿರಕ್ತಕಾಲದ ಸ್ವರವಚನಗಳಲ್ಲಿ ಭಕ್ತಿ ವಸ್ತುವಾದರೂ ರೂಪದಲ್ಲಿ ಬಿನ್ನತೆಯೂ ಕಂಡುಬರುತ್ತದೆ. ಈ ಕಾಲಘಟ್ಟದ ಶರಣರು ಕೆಲವೊಮ್ಮೆ ಬೆಡಗಿನ ರೂಪದಲ್ಲಿ ಸಾಂಕೇತಿಕಾರ್ಥದಲ್ಲಿ ಸ್ವರವಚನಗಳನ್ನು ರಚಿಸಿದ್ದಾರೆ. ಅನುಭಾವ, ತತ್ತ್ವ, ಯೋಗದಂತಹ ಗಹನ ಗಂಭೀರದ ವಿಷಯಗಳನ್ನು ಲೌಕಿಕ ಜಗತ್ತಿನ ಪ್ರಾಣಿ, ಪಕ್ಷಿ, ವ್ಯಕ್ತಿ, ವಸ್ತು, ಪ್ರಕೃತಿ ಮೊದಲಾದ ಸಂಕೇತ ಹಾಗೂ ರೂಪಗಳನ್ನು ಬಳಿಸುವುದರ ಮೂಲಕ ಸುಲಭವಾಗಿ ಗ್ರಹಿಸಲು ಅನುವು ಮಾಡಿಕೊಟ್ಟಿದ್ದಾರೆ. ಈ ಕಾಲಘಟ್ಟದ ಹಾಡುಗಳನ್ನು ಗಮನಿಸಿದಾಗ ಸಮಾಜೋದ್ಧಾರಕ್ಕಿಂತ ಆತ್ಮೋದ್ಧಾರವನ್ನು ಪ್ರತಿಪಾದಿಸುಕೆಯೂ ಅಧಿಕವಾಗಿ ಕಂಡುಬರುತ್ತದೆ. ಇವರುಗಳ ನಂತರ ಬಂದ ತೋಂಟದ ಸಿದ್ಧಲಿಂಗಾದಿಗಳ ಬಂದ ಶರಣ ಕಾಲಕ್ಕೆಲ್ಲ ಸಮಾಜದಲ್ಲಿ ಗೊಂದಲ, ತಲ್ಲಣ ತಳಮಳಗಳಿಂದಾಗಿ, ಒಂದು ಬಗೆಯ ಶೂನ್ಯ ಆವರಿಸಿತು, ವಿಜಯನಗರ ಅವನತಿಯಿಂದ ಮಧ್ಯಕಾಲೀನ ವೀರಶೈವ ಸಮಾಜ ಸಂದಿಗ್ದ ಸ್ಥಿತಿಯಲ್ಲಿತ್ತು. ಆಗ ವೀರಶೈವ ಧರ್ಮದ ಅಸ್ತಿತ್ವದ ಪ್ರಶ್ನೆಯೂ ಇದ್ದುದರಿಂದ ಜೊತೆಗೆ

ಸಮಾಜ ಸುಧಾರಣೆಯೂ ಅವಶ್ಯವಾಗಿದ್ದರಿಂದ ಸಿದ್ಧಲಿಂಗಯತಿಗಳಾದಿಯಾಗಿ ಬಂದ ಶಂಕರದೇವ, ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿಗಳಲ್ಲಿ ಅತ್ತ ಧರ್ಮ ಸಂಬಂಧಿ ಇತ್ತ ಸಾಮಾಜೋದ್ಧಾರದ ಸ್ವರಗೀತೆಗಳು ಅಧಿಕವಾಗಿರುವುದು ಕಂಡುಬರುತ್ತವೆ. ನಿಜಗುಣ ಶಿವಯೋಗಿಗಳಂತಹ ಶರಣರ ಸ್ವರಗೀತೆಗಳಲ್ಲಿ ಭಕ್ತಿಮಾರ್ಗಕ್ಕಿಂತ ಜ್ಞಾನಮಾರ್ಗಕ್ಕೆ ಹೆಚ್ಚಿನ ಒತ್ತು ಇರುವುದು ಕಂಡುಬರುತ್ತದೆ. ಅಲ್ಲದೆ ಷಡಕ್ಷರಿಯಂತಹ ಶರಣರು ಜನರ ಆಡುಮಾತಿನ ಶೈಲಿಯಲ್ಲಿ ರಾಗಬದ್ಧವಾಗಿ ಸಮಾಜಕ್ಕೆ ಲೋಕಕ್ಕೆ ನೀತಿಯನ್ನು ಚಿತ್ರಿಸಿದರು. ವೈದಿಕ ದಾಸರ ಕೀರ್ತನ ಸಾಹಿತ್ಯದ ಪ್ರಭಾವ ಹಾಗೂ ವಿವಿಧ ವರ್ಗಗಳ ತತ್ವಪದಕಾರರ ಪ್ರಭಾವ ಆ ಕಾಲಘಟ್ಟದ ಸ್ವರ ವಚನಕಾರರ ಮೇಲೆ ಆಯಿತು. ಇಂದಿಗೂ ಶರಣರ ಅದರಲ್ಲಿಯೂ ಮಧ್ಯಕಾಲೀನ ಸ್ವರವಚನಕಾರರ ಗೀತೆಗಳು ಭಜನೆ. ಕೋಲಾಟ ಪದ, ಮಂಗಳಾರತಿ ಪದಗಳಾಗಿ ಜನರ ಬಾಯಲ್ಲಿ ನೀಡಿವೆ.

## ಕೊನೆ ಟಿಪ್ಪಣಿಗಳು

೧. ಮಹಾದೇವಯ್ಯ ಟಿ.ಆರ್., ವೀರಶೈವ ವಾಗ್ಗೇಯಕಾರರು, ಪು.೮

೨. ಬಸವರಾಜು ಎಲ್., ಶಿವದಾಸ ಗೀತಾಂಜಲಿ, ಪು. ೨೧೬

೩. ಮಲ್ಲಿಕಾರ್ಜುನ ಶಿ. ಲಠ್ಠೆ, ಸ್ವರವಚನ ಒಂದು ವಿವೇಚನೆ, ಪು.೩೬

೪. ಅದೇ, ಪು.೬೪

೫. ಹಿರೇಮಠ ಬಿ.ಆರ್., ಅವರ ಲೇಖನ, ಸ್ವರವಚನ ವಿಚಾರ ಸಂಕಿರಣ, ಸಂ. ಎಂ.ಎಂ. ಕಲಬುರ್ಗಿ

೬. ಮಲ್ಲಿಕಾರ್ಜುನ ಶಿ. ಲಠ್ಠೆ, ಸ್ವರವಚನ ಒಂದು ವಿವೇಚನೆ, ಪು. ೧೦೦

೭. ವೈ.ಸಿ. ಭಾನುಮತಿ, ತೋಂಟದ ಸಿದ್ಧಲಿಂಗಯುಗದ ಸ್ವರವಚನ ಸಾಹಿತ್ಯ, ಪು. ೧೩೧

೮. ವಿದ್ಯಾಶಂಕರ, ಜಿಗುನಿ ಮರುಳದೇವರ ಕೃತಿಗಳು, ಪು.೮೯

೯. ಮಂಜಪ್ಪ ಹರ್ಡೇಕರ, ಸುಬೋಧಸಾರ, ಪು.೧೨೭

೧೦. ಅದೇ, ಮುನ್ನುಡಿಯ ಭಾಗ

೧೧. ಬಸವನಾಳ ಎಸ್.ಎಸ್., ಕೈವಲ್ಯ ಕಲ್ಲವಲ್ಲರಿ, ಪು.೨೨

೧೨. ಸಿದ್ಧಲಿಂಗಯ್ಯ ಜಿ.ಎಸ್., (ಲೇ.), ಭೂಷಣ, ಪು. ೪೭

೧೩. ಮಹಾದೇವಯ್ಯ ಟಿ.ಆರ್., ವೀರಶೈವ ವಾಗ್ಗೇಯಕಾರರು, ಪು.೮೨

೧೪. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ, ಕಡಕೋಳ ಮಡಿವಾಳೇಶ್ವರ ಸ್ವರವಚನ, ಪು.೧೧

# ಅಧ್ಯಾಯ ೫

## ಶಿವದಾಸರ ಹಾಡುಗಳು : ಭಾಷೆ-ಛಂದಸ್ಸು-ಶೈಲಿ

ಕನ್ನಡ ಸಾಹಿತ್ಯ ಚರಿತ್ರೆಯ ಘಟ್ಟದಲ್ಲಿ ಮಧ್ಯಕಾಲೀನ ವಚನಕಾರರ ಯುಗವು ಒಂದು ವೈಚಾರಿಕ ಘಟ್ಟವೆಂದೇ ಹೇಳಬಹುದು. ಅಂದಿನವರೆಗೆ ಸಂಸ್ಕೃತಿ-ಸಾಹಿತ್ಯದ ಸಾಮ್ರಾಜ್ಯಶಾಹಿ ಧೋರಣೆಯನ್ನು ಕೊನೆಗೊಳಿಸಿ 'ಜನಪದ' ಭಾಷೆಯನ್ನು ನೀಡಿದ ಯುಗ. ವಚನಗಳೆಂಬ ಅತ್ತ ಪದ್ಯವು, ಇತ್ತ ಗದ್ಯವು ಅಲ್ಲದ ಸಾಹಿತ್ಯ ಪ್ರಕಾರವನ್ನು ಬಸವಾದಿ ಶರಣರು ತಮ್ಮ ತತ್ತ್ವಧೋರಣೆಗಳ ಅಭಿವ್ಯಕ್ತಿ ಮಾಧ್ಯಮವಾಗಿ ಬಳಸಿಕೊಂಡು, ಜನರಿಗೂ ಅಭಿವ್ಯಕ್ತಿ ಸ್ವಾತಂತ್ರ್ಯ ಕೊಡುವುದರ ಮೂಲಕ ಸಾಮಾಜಿಕ-ಧಾರ್ಮಿಕ ಕ್ರಾಂತಿಯನ್ನೇ ಕನ್ನಡ ನೆಲದಲ್ಲಿ ಕೈಗೊಂಡರು. 'ದೇವವಾಣಿಗೆ ಜನವಾಣಿಯಾಗುವುದು ಅಸಾಧ್ಯವಾದಾಗ ಜನವಾಣಿಯನ್ನೇ ದೇವವಾಣಿಯ ಮಟ್ಟಕ್ಕೇರಿಸಿದ ಪವಾಡ ವಚನಕಾರರದು"[1] ಅಂದಿನವರೆಗೂ ಪಂಡಿತಶಾಹಿ ಭಾಷೆಯಾಗಿದ್ದ ಸಂಸ್ಕೃತ ಭೂಯಿಷ್ಠ ಕನ್ನಡವನ್ನು ಸಂಪೂರ್ಣ ತ್ಯಜಿಸಿ. ಜನರ ಭಾಷೆಯನ್ನೇ ದೇವಭಾಷೆ ಮಾಡಿದರು. ವೀರಶೈವ ಧರ್ಮವನ್ನು ಪ್ರಚಾರ ಗೈಯ್ಯುವುದರ ಮೂಲಕ ಸಾಮಾಜಿಕ ಧಾರ್ಮಿಕ ವಲಯಗಳಲ್ಲಿ ಹೊಸ ಬೆಳಕನ್ನು ಬೆಳೆಸಿದರು. ಶಿಷ್ಟಸಾಹಿತ್ಯವೂ ಜಡಗೊಂಡಾಗ ಹೇಗೆ ಜನಪದದ ಕಡೆಗೆ ಹೊರಳುತ್ತದೆಯೋ ಹಾಗೆಯೇ ಬಸವಾದಿ ಶರಣರ ಪೂರ್ವ ಚಂಪೂಕವಿ ಪಂಪನು ಸಹ ಅಂದು ಜಡ ಸ್ಥಿತಿಯಲ್ಲಿದ್ದ ಚಂಪೂ ಸಾಹಿತ್ಯವನ್ನು ಪುನಶ್ಚೇತನಗೊಳಿಸಲು ಕಂಡುಕೊಂಡ ಹೊಸ ಆಯಾಮ ಲೌಕಿಕ ಕಾವ್ಯಗಳಲ್ಲಿ ಜಾನಪದೀಯ ಸತ್ವವನ್ನು ತುಂಬುವುದರ ಮೂಲಕ. "ದೇಶಿಯೊಳ್ ಪುಗುವುದು ಪೊಕ್ಕು ಮಾರ್ಗದೊಳ್ ತಳ್ವುದು"[2] ಇಲ್ಲಿ ಪಂಪಕವಿಯ ಉದ್ದೇಶ ಜಡಸಾಹಿತ್ಯವನ್ನು ಜನರ ಹತ್ತಿರಕ್ಕೆ ಕರೆದೊಯ್ಯಬೇಕಾದರೆ ಜನಸಾಮಾನ್ಯರಲ್ಲಿನ ಆದರ್ಶಗಳೆಂದು ಭಾವಿಸಲಾದ ಗುಣಗಳಿಗೆ ತನ್ನ ಕಾವ್ಯವನ್ನು ಒಯ್ಯುವುದು 'ಛಲದೊಳ್ ದುರ್ಯೋಧನ, ನನ್ನಿ ನಳಿಯೊತನಯಂ, ಬಲದೊಳ್ ಮುದ್ರೇಶ, ಅತ್ಯುನ್ನತಿಯೊಳ್ಮರಸಿಂಧೂದ್ಭವಂ"[3] ಹೀಗೆ ಭಾರತದ ವಿವಿಧ ಪಾತ್ರಗಳ ವಸ್ತುಪ್ರತಿರೂಪಗಳನ್ನೊಡ್ಡುತ್ತಾನೆ. ಇದನ್ನು ಪಂಪನ ಆದಿಯಾಗಿ ಬಂದ ಅನೇಕ ಜೈನ ಕವಿಗಳು ಅನುಸರಿಸಿದರು.

ಹೀಗೆ ಕವಿರಾಜಮಾರ್ಗದ ಆದಿಯಾಗಿ ಕನ್ನಡ ಕಾವ್ಯಗಳು ಕನ್ನಡದ ದೇಶಿ ಸೊಗಡನ್ನು ಪಡೆದುಕೊಳ್ಳುವುದರ ಮೂಲಕ ಜನರ ಪ್ರೀತಿಗೆ ಪಾತ್ರವಾಗುವಿಕೆಯು ಸಾಹಿತ್ಯ ಚರಿತ್ರೆಯ ಅವಲೋಕನದಿಂದ ಕಂಡುಬರುತ್ತದೆ. ಆದರೂ ಕನ್ನಡ ಸಾಹಿತ್ಯವು ತನ್ನ ನಿಜವಾದ ದೇಶಿ ಸೊಗಡನ್ನು ಪಡೆದುಕೊಂಡದ್ದು ೧೨ನೇ ಶತಮಾನದ ವಚನಕಾರರಿಂದಲೇ ಬಸವಣ್ಣ, ಅಲ್ಲಮ, ದಾಸಿಮಯ್ಯ, ಅಕ್ಕಮಹಾದೇವಿ, ಚೆನ್ನಬಸವಣ್ಣನಂತಹ ಅನೇಕ ಜನರು ಜನರ ಆಡುಮಾತಿನಲ್ಲೇ ವಚನಗಳನ್ನು ಹಾಡಿದರು. ಅವುಗಳ ಮೂಲಕ ಜನತೆಗೆ ಬಾಯನ್ನು ಕೊಟ್ಟರು. ಅವರಿಂದಲೂ

ಹಾಡಿಸಿದರು. ಆಡುಮಾತಿನ ವಚನಗಳ ಮೂಲಕ ಶಿವನ ಆರಾಧನೆ, ಭಕ್ತಿನ ಪಾರಮ್ಯ, ಸಾಮಾಜಿಕ ವಿಡಂಬನೆ, ಶರಣಸತಿ ಲಿಂಗಪತಿಯಂತಹ ವಿಷಯ ವಸ್ತುಗಳನ್ನು ಅಭಿವ್ಯಕ್ತಿಸಿ, ಲೋಕಕಲ್ಯಾಣವನ್ನು ಕಂಡುಕೊಂಡರು. ಅವರ ಅಭಿವ್ಯಕ್ತಿ ಮಾಧ್ಯಮವಾದ ವಚನಗಳ ಭಾಷೆ, ಸರಳ, ಸ್ಪಷ್ಟ, ಅದನ್ನು ಈ ವಚನದ ಮೂಲಕ ಗ್ರಹಿಸಬಹುದು.

"ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡಲಿ, ಬಡವನಯ್ಯ
ಎನ್ನ ಕಾಲೇ ಕಂಬ ದೇಹವೆ ದೇಗುಲ
ಶಿರ ಹೊನ್ನಕಲಶವಯ್ಯ
ಕೂಡಲಸಂಗಮದೇವ ಕೇಳಯ್ಯಾ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ"

ಬಸವಣ್ಣನ ಈ ವಚನದ ಭಾಷೆ ಜನಪದದ ಆಡುಮಾತಲ್ಲೇ ಶುದ್ಧ ಕನ್ನಡದಲ್ಲಿ ರಚಿತವಾಗಿದ್ದು. ಬದುಕನ್ನೇ ಕಟ್ಟುವ ಕೆಲಸಕ್ಕೆ, ಬದುಕನ್ನೇ ಅಧ್ಯಾತ್ಮಿಕತೆಯಿಂದ ಜೀವಿಸುವಿಕೆಯನ್ನು ಅತೀ ಸರಳ ಭಾಷೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

ವಚನಗಳ ಮೂಲಕ ಸಾಮಾಜಿಕ-ಧಾರ್ಮಿಕ ಕ್ರಾಂತಿ ಕೈಗೊಂಡ ಶಿವಶರಣರು, ತತ್ಕಾಲಕ್ಕೆ ಹಾಡುಗಳನ್ನು ರಚಿಸಿದ್ದಾರೆ. ವಚನಗಳನ್ನು ಹಾಡುವುದರ ಮೂಲಕವೇ ಸಾಕಷ್ಟು ಬದಲಾವಣೆಯನ್ನು ಕಂಡಿದ್ದ ಅವರು ಅವುಗಳಿಗೆ ರಾಗ-ತಾಳ ಸೇರಿಸುವುದರ ಮೂಲಕ ಹಾಡುಗಳನ್ನು ರಚಿಸಿದರು. ಎಲ್.ಬಸವರಾಜು ಅವರು ಶಿವದಾಸರೇ ವಚನಗಳಂತೆ ಹಾಡುಗಳನ್ನು ರಚಿಸಿದ್ದಾರೆಂಬುದನ್ನು ಶಿವದಾಸ ಗೀತಾಂಜಲಿ ಪೀಠಿಕಾಭಾಗದಲ್ಲಿ ಅದಕ್ಕೆ ಪೂರಕ ಮಾಹಿತಿಯನ್ನು ಕೊಡುತ್ತಾರೆ. ಅದರಂತೆ ಹಿಂದಿನ ಅಧ್ಯಾಯದಲ್ಲೂ ಶಿವಶಣರು ಹಾಡುಗಳನ್ನು (ಸ್ವರವಚನ) ರಚಿಸಿಕೊಂಡು ೨೦ನೇ ಶತಮಾದವರೆಗೆ ಹಾಡಿನ ಪರಂಪರೆಯನ್ನು ಮುಂದುವರಿಸಿಕೊಂಡು ಬಂದರು. ಕಾಲಕ್ಕೆ ಅನುಗುಣವಾಗಿ ಹಾಡುಗಳ ವಸ್ತು ಸ್ವರೂಪದಲ್ಲಿ ಸ್ವಲ್ಪ ಭಿನ್ನ ಸ್ವರೂಪವನ್ನು ಕೊಂಡರು. ಮೂಲ ಆಶಯದಲ್ಲಿ ಬದಲಾವಣೆ ಪಡೆದುಕೊಳ್ಳದೇ ಹಾಡುಗಳು ರಚಿತವಾಗಿರುವುದು ಕಂಡುಬರುತ್ತದೆ.

ಶಿವದಾಸರ ಹಾಡುಗಳ ಭಾಷೆಯ ವೈಶಿಷ್ಟ್ಯತೆಯ ಬಗ್ಗೆ ಗಮನಿಸುವುದಾದರೆ ವಚನಗಳಂತೆ ಸರಳ ಆಡುಮಾತಿನಲ್ಲಿ ಹಾಡುಗಳು ರಚಿತವಾಗಿರುವುದು ಕಂಡುಬರುತ್ತವೆ. ಕೆಲವು ಕಡೆ ಬೆಡಗಿನ ರೂಪದ ಗೀತೆಗಳು ಕಂಡುಬಂದರೂ ಅವುಗಳ ಪ್ರಮಾಣ ಕಡಿಮೆ. ಬಸವಾದಿ ಶರಣರ ಹಾಡುಗಳ ಭಾಷೆಯಲ್ಲಿ ಶಿಷ್ಟ ಹಾಗೂ ಬೆಡಗಿನ ರೂಪದ ಹಾಡುಗಳನ್ನು ಅಧಿಕವಾಗಿ ಕಾಣುತ್ತೇವೆ. ಸಂಸ್ಕೃತದ ಪಾಂಡಿತ್ಯ ಪ್ರಭಾವವು ಅಧಿಕವಾಗಿದ್ದ ಕಾಲದಲ್ಲಿ ಹಾಡುಗಳಲ್ಲಿ ಬೆಡಗಿನ ರೂಪ ಇದ್ದುದರಿಂದ ಹಾಡುಗಳ ಬಿಗಿ ಹಿಡಿತದ ಕಂಡುಬರುತ್ತದೆ. ಅದಕ್ಕೆ ಪ್ರತಿ ವಿರೋಧವೆನ್ನುವಂತೆ ವಚನಗಳ ಭಾಷೆ ಸರಳತೆಯಿಂದ ಕೂಡಿದೆ ಆದರೂ ಅಲ್ಲಮಪ್ರಭುವಂಥ ಶರಣರ ವಚನಗಳನ್ನು ಸುಲಭವಾಗಿ ಗ್ರಹಿಸಲು ಸಾಧ್ಯವಾಗದು. ಆದರೆ ಹಾಡುಗಳ ರಚನೆಯ ಭಾಷೆಯು ಅತ್ತ ಕಠಿಣವೂ ಅಲ್ಲದ ಇತ್ತ ಸುಲಭವು ಅಲ್ಲದ ರೀತಿಯಲ್ಲಿ ರಚಿತವಾಗಿದ್ದು. ಆ ಕಾಲಘಟ್ಟದ ಹಾಡುಗಳನ್ನು ನೋಡುವುದರ ಮೂಲಕ ಗ್ರಹಿಸಬಹುದು.

“ನಿಮ್ಮ ಶರಣರ ಒಕ್ಕುದ ಮಿಕ್ಕುದ ಕೊಂಡು
ನಿನ್ನ ತನುಮನ ಶುದ್ಧವಾದುದಯ್ಯ ||ಪಲ್ಲವಿ||

ಒಡೆಯರು ಮನೆಗೆ ಬಂದರೆ, ಎ-
ನ್ನೊಡಲಾಸೆಯ ನಾನರಿಯದೆ,
ಸಕಲ ಪದಾರ್ಥವ ನೀಡಿ,
ಅವರೊಕ್ಕು ಹಾರಿಕೊಂಡಿಪ್ಪೇನಯ್ಯ” (ಶಿ.ಗೀ. ಪು.೧೬೧)

‘ಪ್ರಸಾದ’ ಮಹಿಮೆಯನ್ನು ಕೊಂಡಾಡುವ ಈ ಹಾಡು ‘ವರಾಳಿ’ ರಾಗದಲ್ಲಿದ್ದು, ಸುಲಭವಾಗಿ ಗ್ರಹಿಕೆಯಾಗುತ್ತದೆ. ಪ್ರಾರಭದಲ್ಲಿ ಪಲ್ಲವಿಯಿದ್ದು, ನಂತರದಲ್ಲಿ ನಾಲ್ಕು ಸಾಲುಗಳ ಪದ್ಯಗಳ ಗುಚ್ಛಗಳಿಂದ ಕೂಡಿದ್ದು ಕೊನೆಯ ಗುಚ್ಛದಲ್ಲಿ ಹಾಡನ್ನು ರಚಿಸಿದ ಶಿವಶರಣನ ಅಂಕಿತದಿಂದ ಕೂಡಿದೆ. ಈ ಕಾಲಘಟ್ಟದ ಸ್ವರವಚನಗಳಲ್ಲಿ ಪ್ರಮುಖವಾಗಿ ಸಾಮಾಜಿಕ ವಸ್ತುವಿಗಿಂತ ವೀರಶೈವ ತತ್ತ್ವದ ಪ್ರಸಾರವನ್ನು ತಿಳಿಯಪಡಿಸುವಿಕೆಯು ಅಧಿಕವಾಗಿರುವುದು. ಸ್ವರವಚನಗಳ ವಸ್ತುವಿನ ಮೂಲಕ ತಿಳಿದುಬರುತ್ತದೆ. ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರಗಳಂತಹ ವಸ್ತುಗಳನ್ನು ಹಾಡಿನ ಮೂಲಕ ಹೇಳುವಾಗ ಭಾಷೆಯು ಸ್ವಲ್ಪ ಬಿಗಿ ಹಿಡಿತದಿಂದ ಕೂಡಿರುವಿಕೆಯು ಕಂಡುಬರುತ್ತದೆ. ಚೆನ್ನಬಸವಣ್ಣನಂತೆ ಶಿವಶರಣರು ಕ್ರಿಯಾಜ್ಞಾನ ಸಾಮರಸ್ಯ ಸಾಧನೆಯೇ ಷಟ್‌ಸ್ಥಲ ಸಿದ್ಧಾಂತ ಗುರಿಯಾತ್ತು ಎಂದ್ಹೇಳುವಲ್ಲಿ ಇವರಿಗೆ ವೀರಶೈವ ತತ್ತ್ವ ಪ್ರತಿಪಾದನೆಯೇ ಪ್ರಮುಖವಾಗುವುದರಿಂದ ಅವುಗಳನ್ನು ಹೇಳುವಾಗ ಭಾಷೆಯು ಸಹ ಸ್ಪಷ್ಟ, ಗಂಭೀರತೆಯಿಂದ ಕೂಡಿಕೊಂಡಿದೆ.

“ಕ್ರಿಯೆಯಜ್ಞಾನ, ಅಜ್ಞಾನವೇ ಕ್ರಿಯೆ
ಜ್ಞಾನವೆಂದಡೆ ತಿಳಿವುದು,
ಕ್ರಿಯೆಯೆಂದರೆ ತಿಳಿದಂತೆ ಮಾಡುವುದು
ಪರಸ್ತ್ರೀಯ ಭೋಗಿಸಬಾರದೆಂಬುದೇ ಜ್ಞಾನ
ಅದರಂತೆ ಆಚರಿಸುವುದೇ ಕ್ರಿಯೆ
ಅಂತು ಆಚರಿಸದಿದ್ದರೆ
ಅದು ಅಜ್ಞಾನ ನೋಡಾ, ಕೂಡಲಚೆನ್ನಸಂಗಮದೇವ”[೪]

ಈ ವಚನದ ಭಾಷೆಯಲ್ಲಿ ಸರಳತೆಗಿಂತ ಬಿಗಿಯಾದ ಹಿಡಿತ ಕಂಡುಬರುತ್ತದೆ. ಇಲ್ಲಿ ಗಮನಿಸಿ ಹೇಳುವುದಾದರೆ, ಬಸವಾದಿ ಶರಣರ ಕಾಲಘಟ್ಟದಲ್ಲಿ ಹಾಡುಗಳ ಪ್ರಮುಖ ವಸ್ತುವೆಂದರೆ ವೀರಶೈವ ತತ್ತ್ವ ಚಿಂತನೆಗಳ ಪ್ರತಿಪಾದನೆ ಮಾಡುವುದರಿಂದ ಸ್ವಾಭಾವಿಕವಾಗಿಯೇ ಭಾಷೆಯು ಸಹ ಸ್ವಲ್ಪ ಶಿಷ್ಟತೆಯಿಂದ ಕೂಡಿಕೊಂಡಿದೆ.

ನೂರೊಂದು ವಿರಕ್ತರ ಕಾಲದ ಹಾಡುಗಳಲ್ಲಿ ಸಾಮಾಜಿಕ ವಿಚಾರಗಳಿಗಿಂತ ತತ್ತ್ವ, ಲೋಕನೀತಿ ಮೊದಲಾದ ವಿಷಯಗಳೇ ಪ್ರಮುಖವಾಗಿರುವುದು ಕಂಡುಬರುತ್ತದೆ. ಅಲ್ಲದೆ ತತ್ತ್ವ, ಲೋಕನೀತಿಯಂತಹ ವಸ್ತುವಿನ ನಿರೂಪಣೆಗಾಗಿ ಲೌಕಿಕ ಜಗತ್ತಿನ ಸಂಕೇತಗಳನ್ನು ಅಂದರೆ ಪ್ರಾಣಿ, ಪಕ್ಷಿಯಂತಹ ಸಂಕೇತಗಳ ಮೂಲಕ ಹಾಡನ್ನು ಕಟ್ಟಿ ಲೋಕನೀತಿಯನ್ನು ಸಾರುವಿಕೆಯು ಪ್ರಮುಖವಾಗಿ ಕಾಣಿಸುತ್ತದೆ.

ರಾಗ : ಭೈರವಿ

"ಹಾರಿತೋ ಹಂಸ ಹಾರಿತೋ
ಮೂಜು ನದಿಯ ದಾಂಟಿ ಮುಕುತಿರಾಜ್ಯದತ್ತ ||ಪ||

"ಸೊಲ್ಲುತಿದೆ ಈಶಾನ್ಯದಲಿ ಜಂಬುಕ ತಾನು
ಎಲ್ಲ ಮಾತೇಕೆ ಶಿವಪುರವಾದುದು
ತಲ್ಲೀಯವಹುದು ಗುರುಶಾಂತನೊಳಗಾ ಬಳ್ಳಿ
ನಿಲ್ಲುತಿಗೆ ಬಿಟ್ಟ ಬಯಲೊಳಗೆ ಲಲಿತಾಂಗಿ (ಕರಸ್ಥಲ ನಾಗಿದೇವ, ಶಿ.ಗ.ಪು.೩೦೮)

ಹಾಗೆಯೇ,

"ಗುರುವಿಂದಲುದಿಸಿ ಗುರುವಿನ ನಿಜವರಿಯದ
ನರನಿಗೆ ಶಿವಪಥವೆಲ್ಲಿಯದೋ ||ಪ|| (ಗುರುಪುರದ ಮಲ್ಲಯ್ಯ)

ಮೇಲಿನ ಹಾಡುಗಳಲ್ಲಿ ಒಂದು ತತ್ವಬೋಧನೆಯನ್ನು, ಮತ್ತೊಂದು ಲೋಕನೀತಿಯಂತಹ ವಸ್ತುಗಳನ್ನು ಅಭಿವ್ಯಕ್ತಿಸುತ್ತಿವೆ. ತಾತ್ವಿಕ ಧೋರಣೆಯಿಂದ ದೃಷ್ಟಿಯಿಂದ ಮಾರ್ಗನಿಷ್ಠವೆನಿಸಿದರೂ ಅವು ಅಭಿವ್ಯಕ್ತಿಯ ತಂತ್ರದಲ್ಲಿ ಶುದ್ಧ ದೇಶಿಯತೆಯನ್ನು ಮೈಗೂಡಿಸಿಕೊಂಡಿವೆ. ನಿಜಗುಣಶಿವಯೋಗಿಗಳಾದಿಯಾಗಿ ಬರುವ ಬತ್ತಲೇಶ್ವರ ಶರಣನ ಹಾಡುಗಳಲ್ಲಿ ಸಂಕೇತರೂಪದ ಗೀತೆಗಳ ಜೊತೆಗೆ ಕೋಲಾಟದ ಶುದ್ಧ ಜಾನಪದದ ದಾಟಿಯ ಗೀತೆಗಳು ಕಂಡುಬರುತ್ತಿದ್ದು, ಅಧ್ಯಾತ್ಮದಂತಹ ವಸ್ತುವನ್ನು ಒಳಗೊಂಡಿರುವುದನ್ನು 'ಚಂದಮಾಮ' ಹಾಡಿನ ಮೂಲಕ ನೋಡಬಹುದು.

"ಮುಂದ ಮುಂದಕ್ಕೆ ಹೋಗಿ
ಮುಕ್ತನಾದುದೊಂದು ಚಂದಮಾಮ
ಅಂಧಕ ನಯನವ ತೆರೆದು
ನೋಡುವುದೊಂದು ಚಂದಮಾಮ" ||ಪ|| (ಶಿ.ಗೀ.ಪು.೩೦೮)

ಇಲ್ಲಿ ಭಾಷೆಯು ಶುದ್ಧ ಜಾನಪದೀಯವಾಗಿರುವುದು ಕಂಡುಬರುತ್ತದೆ. ಹಾಗೆಯೇ ಇದೇ ಕಾಲಘಟ್ಟದಲ್ಲಿ ಬರುವ ನಿರ್ವಾಣಿ ಬೋಳೇಶನ ಹಾಡುಗಳು ಶರಣಸತಿ-ಲಿಂಗಪತಿಯಂತಹ ಭಾವವುಳ್ಳ ಹಾಡುಗಳು ಬೆಡಗಿನ ರೂಪದಿಂದ ಕೂಡಿಕೊಂಡಿವೆ.

"ಅಂಬರ ಚಪ್ಪರದಡಿಯಲಿ ಘನ
ಕುಂಭಿನಿಯನೆ ಹಸೆಯ ಹಾಸಿ
ಇಂಬಪ್ಪ ಜೀವಾದಿ ಕರಣ-ನಿಬ್ಬಣಿಗರು
ಸಂಭ್ರಮ ಸಂಭ್ರಾಮಿಸಿದರು" ||ಪಲ್ಲವಿ||                    (ಶಿ.ಗೀ.ಪು.೨೫೭)

ಹೀಗೆ ಬೆಡಗಿನ ರೂಪವನ್ನೇ ಒಳಗೊಂಡ ಇಂತಹ ಗೀತೆಗಳು ಜನರಿಂದ ದೂರವಾಗಿ ಉಳಿದವು. ಕಾರಣ ಇವುಗಳು ಸುಲಭವಾಗಿ ಅರ್ಥವಾಗದೇ ಹೋದುದರಿಂದ ಇದು ಮುಂದೆಯೂ ಶಂಕರದೇವ, ಕವಿಲಿಂಗರಂತಹ ಶರಣರ ಹಾಡುಗಳಲ್ಲಿ ಕಂಡುಬರುತ್ತದೆ. ಬೆಡಗಿನ ಪದಗಳ ಮರ್ಮವನ್ನು ತಿಳಿದಾಗ ಮಾತ್ರ ಅರ್ಥೈಯಿಸಲು ಸುಲಭ ಸಾಧ್ಯವಾಗುತ್ತವೆ. ಉದಾ: ನಿರ್ವಾಣಿ ಬೋಳೇಶನ "ಗೋರವಿಯ ರಾಡಿಮ ರಾಹೋ" ಎಂಬ ಹಾಡು ಒಬ್ಬ ಬೇಡಕನ್ಯೆಯನ್ನು ಕುರಿತು ವರ್ಣಿಸುವಂತೆ ಕಂಡರೂ ಅದು ಶರಣ ಸತಿ ಶೃಂಗಾರದ ವರ್ಣನೆಯನ್ನು ತಿಳಿಸುತ್ತದೆ.

**ರಾಗ: ಪಾಡಿ**

"ಕುಂಕುಮದ ವಸಂತನಮ್ಮ
ಶಂಕಿನ ಗೊರವಿಯ ರಾಡಿಯ ರಾಹೋ            ||ಪಲ್ಲವಿ||
ನಲಿವ ಹೀಲಿ ಗುಲಗಂಜಿಯ ದಂಡೆ
ಕಾಲಲ್ಲಿ ಗೆಜ್ಜೆ ಕೊರಳಲ್ಲಿ ಶಂಬಮಣಿ
ಕುಂಭಿಟ್ಟು ಕುಣಿ ಕುಣಿದಾಡಿಯರಾಹೊ            ||೧||        (ಶಿ.ಗೀ.ಪು.೨೯೧)

ಬೆಡಗಿನಿಂದ ಕೂಡಿದ ಈ ಪದಗಳ ಅರ್ಥ ಗೊತ್ತಾದಾಗ ಅದು ಮತ್ತಷ್ಟು ಹಿಗ್ಗುತ್ತದೆ.

೧. ಕುಂಕುಮ-ಜ್ಞಾನರಂದ ರಸಭಾವ

೨. ಶಂಕಿನ ಗೊರವಿಯರು-ಮಂತ್ರಶಕ್ತಿಯರು

೩. ನವಿಲಹೀಲಿ-ಭಾವಾಚಾರ

೪. ಗುಲಗಂಜಿ-ಸ್ಥಲಕುಳ

೫. ಕಾಲಲಿಗೆಜ್ಜೆ-ಕ್ರಿಯಾಸ್ತುತಿ"

ಇಂತಹ ಬೆಡಗಿನ ಹಾಡುಗಳ ಪದದ ಅರ್ಥವನ್ನು ಬಿಡಿಸಿದಾಗ ಮಾತ್ರ ಅದರ ಭಾಷೆಯ ಭಾವ ತಿಳಿಯುವುದೇ ವಿನಃ, ಇಲ್ಲದಿದ್ದರೆ ಸಾಮಾನ್ಯರ ಗ್ರಹಿಕೆಯ ದೃಷ್ಟಿಯಿಂದ ಬಹುದೂರ ಉಳಿಯುತ್ತವೆ. ಆದುದರಿಂದ ಬೆಡಗಿನ ರೂಪದ ಇಂತಹ ಹಾಡುಗಳು ಅಷ್ಟೊಂದು ಮಹತ್ವ ಪಡೆಯಲಿಲ್ಲವೆನ್ನಬಹುದು.

೧೭ನೇ ಶತಮಾನದಲ್ಲಿ ಬರುವ ನಿಜಗುಣರು ಜ್ಞಾನ ಅನುಭವದಿಂದ ತುತ್ತತುದಿಗೇರಿದವರು. ತಮಗೆ ದೊರೆತ ಜ್ಞಾನವನ್ನು ಸಹಜೀವಿಗಳ ಒಳಿತಿಗೆ ಶ್ರಮಿಸಲು ಲೋಕಕಲ್ಯಾಣಕ್ಕೆ ಕಾಲಿರಿಸಿದರು. ಇವರ ಹಾಡುಗಳು ಜನಸಾಮಾನ್ಯರ ಭಾಷೆಗೆ ಹತ್ತಿರವಾದುದರಿಂದ ಇಂದಿಗೂ ಹಳ್ಳಿಗಳಲ್ಲಿ ಜನರ ಬಾಯಲ್ಲಿ ನಿಂತಿವೆ.

"ತನುವ ದಂಡಿಸಬೇಡ ಮನವನಿಲ್ಲಿಸಬೇಡ
ಧನವ ನೀಗಿರಬೇಡ ಮನೆಮಾರು ತೊರೆದು
ವನವಾಸ ಬೇಡ ಎನಗಿನಿತು ತತ್ತ್ವಜ್ಞಾನ
ಸುಜನಿಸಲಘವೆಲ್ಲವನು ಕೆಡಿಸುವುದರಿದೆ"

'ಬಹಳ ಸಾಧನೆಯನ್ನು ಜನರು ಮಾಡದಿದ್ದರೆ ಹೋಗಲಿ. ಸ್ವಲ್ಪವಾದರೂ ತತ್ತ್ವಜ್ಞಾನ ತಿಳಿದಿರಲಿ ಎಂದು ಜನರಿದ್ದಲ್ಲಿಗೆ ಹೋಗಿ ಹಾಡಿದವರು. ಹಾಗೆಯೇ ಮುಪ್ಪಿನ ಷಡಕ್ಷರಿಯ ಹಾಡುಗಳು ಸಹ ಜನರ ಆಡುಮಾತಲ್ಲೇ ರಚಿತವಾಗಿ ಶುದ್ಧವಾದ ದೇಶಿಯನ್ನು ಮೈಗೂಡಿಸಿಕೊಂಡು ರಚಿತವಾಗಿವೆ. ೧೯ನೇ ಶತಮಾನದ ಆದಿಯಲ್ಲಿ ಬರುವ ಶರಣ ಬಾಲಲೀಲಾ ಮಹಂತ ಶಿವಯೋಗಿಗಳವರೆಗೂ ಹಾಡುಗಳ ಭಾಷೆಯು ಸರಳ, ಸ್ಪಷ್ಟತೆಯಿಂದ ಕೂಡಿಕೊಂಡಿದೆ. ಇಲ್ಲಿ ಮುಖ್ಯವಾಗಿ ಲೋಕ ಕಲ್ಯಾಣ. ಸಮಾಜಮುಖಿ ಆಂದೋಲನವೇ ಮುಖ್ಯವಾದುದರಿಂದ ಜನಮುಖಿ ಸಾಹಿತ್ಯವೇ ಕಂಡುಬರುತ್ತದೆ.

"ವನಗಿಳಿಯು ಬಂದೆನ್ನ ಮನಗಿಳಿಯ ಬುದ್ಧಿಯನು
ವಿನಯದಿಂ ಕೆಡಿಸಿ ವೊಗಲು ಬಂದೆಯಾ ||ಪ||

ಶಿವಶಿವೆಂಬುದ ಮರೆಸಿ ಚಿವ ಚಿವೆಂಬುದು ಕಲಿಸಿ
ಭವಿ ಕಾಲ ಮಾರ್ಜಾಲನುಣಿಸ ಬಂದೆಯಾ
ಪವನ ವರ್ಣನದ ಗಿಳಿಯೆ ಧವಳವರ್ಣದ ಗಿಳಿಯೆ
ಭವವೃಕ್ಷಕೆನ್ನ ಹಾರ ಕಲಿಸ ಬಂದೆಯಾ||"[೬]

ಅಧ್ಯಾತ್ಮ ಗೀತೆಯಾಗಿರುವ ಈ ಹಾಡು, ಬಹಿರಂಗದ ಪ್ರಭಾವ ಅಂತರಂಗದ ವ್ಯಾಪಾರವನ್ನು ಹೀಗೆ ಬದಲಿಸುತ್ತದೆ. ಕದಲಿಸುತ್ತದೆ ಎಂಬುದನ್ನು ಗಿಳಿಯ ರೂಪಕದಿಂದ ಚಿತ್ರಿಸಿದ್ದಾರೆ.

ಬಸವಾದಿ ಶರಣರ ವಚನಗಳು ಇಂದಿಗೂ ಜನಮಾನಸದಲ್ಲಿ ಅಚ್ಚಳಿಯದೇ ಉಳಿದಿವೆ. ಆದರೆ ಅವರ ಹಾಡುಗಳು. ಸ್ವಲ್ಪ ಬೆಡಗಿನ ರೂಪದಿಂದಲೋ ಏನೋ ವಚನಗಳಂತೆ ಜನರ ಬಾಯಲಿ ಹಾಡಲು ಬರುವುದಿಲ್ಲ. ನಿಜಗುಣರಾದಿಯಾಗಿ ಬರುವ ಅನುಭಾವಿಗಳ ಲೋಕತತ್ತ್ವಗಳನ್ನೊಳಗೊಂಡ ಹಾಡುಗಳು ಜನರ ಬಾಯಲ್ಲಿ ನಲಿದಾಡುತ್ತಿವೆ. ಇದಕ್ಕೆ ಕಾರಣ ಶರಣ ವಚನಗಳಲ್ಲಿ ಸರಳ ಭಾಷೆಯನ್ನು ಬಳಸಿದ್ದರಿಂದ ಇಂದಿಗೂ ಹಾಡಲ್ಪಡುತ್ತಿವೆ. ಆದರೆ ಬಸವಾದಿ ಶರಣರ ಸ್ವರಗೀತೆಗಳು ಭಾಷೆಯ ದೃಷ್ಟಿಯಿಂದ ಬಿಗಿ, ಅದುದರಿಂದ ಜನ-ಮನದಲ್ಲಿ ಅಷ್ಟೊಂದು ನಿಂತಿಲ್ಲ. ೧೯ನೇ ಶತಮಾನದ ಆದಿಯಾಗಿ ಅನೇಕ ಶಿವಶರಣರು ಸಮಾಜಮುಖಿ ಹಾಡುಗಳನ್ನು ತಾಳಬದ್ಧವಾಗಿ ಕಟ್ಟಿದುದರಿಂದ ಇಂದಿಗೂ ಅವು ಭಜನೆ. ಕೋಲಾಟ, ರಂಗಪದಗಲ್ಲಿ ಹಾಡುತ್ತಾ ಬಂದಿವೆ. ಒಟ್ಟಿನಲ್ಲಿ ಜನರ ಜನಪದ ಭಾಷೆ ಯಾವ ಸಾಹಿತ್ಯದಲ್ಲಿ ಇರುತ್ತದೆಯೋ ಅದು ಜನಮಾನಸದಲ್ಲಿ ಉಳಿಯುತ್ತದೆನ್ನಬಹುದು.

ಶಿವಶರಣರ ಹಾಡುಗಳು ಪದ್ಯ ಲಯದಿಂದ ಕೂಡಿರುವಂತಹವು ಆದ್ದರಿಂದ ರಚನಕಾರರು ಪ್ರತಿ ಹಾಡುಗಳಿಗೆ ರಾಗಗಳನ್ನು ಸೂಚಿದ್ದಾರೆ. ರಾಗಬದ್ಧವಾದ ಭಾಷೆಯನ್ನು ಈ ಗೀತೆಗಳು ಒಳಗೊಂಡಿರುವುದರಿಂದ ಇವುಗಳನ್ನು ವಚನಗಳಂತೆ ವಾಚಿಸದೇ ಹಾಡಿದಾಗ ಸುಲಭವಾಗಿ ಗ್ರಹಿತವಾಗುತ್ತವೆ. ತಾಳ-ವಾದ್ಯಗಳನ್ನು ಹಿಡಿದುಕೊಂಡು ಹಿಮ್ಮೇಳ-ಮುಮ್ಮೇಳವನ್ನು ಹೊಂದಿ ಜನಪದ ಭಾಷೆಯ ಭಾವವನ್ನು ಹೊಂದಿದ ಹಾಡುಗಳನ್ನು ಹಾಡಿದಾಗ ಮಾತ್ರ ಅವುಗಳ ನಿಜರೂಪವನ್ನು ಕಂಡುಕೊಳ್ಳಬಹುದು. ಯಾವುದಾದರೂ ವಸ್ತುವನ್ನು ಹಾಡಿನಲ್ಲಿ ವಿವೇಚಿಸುವಾಗ ಇಡೀ ಹಾಡಿನ ಪದ್ಯಗಳ ಗುಚ್ಛವೂ ಆ ವಸ್ತುವನ್ನು ಅಭಿವ್ಯಕ್ತಿಸುತ್ತಿರುತ್ತದೆ.

ಶಿವದಾಸರ ಹಾಡುಗಳು ಭಾಷೆಯ ಬಾಹ್ಯರೂಪವನ್ನು ಪಡೆದಂತೆ ಆಂತರಿಕ ಸ್ವರೂಪವು ಅವುಗಳ ಭಾಷೆಯ ವಿಶಿಷ್ಟತೆಯನ್ನು ತಿಳಿಸುತ್ತದೆ.

ಶಬ್ದಗಳ ವಿಚಾರವಾಗಿ ಹೇಳುವುದಾದರೆ, ಶಿವಶರಣರ ಹಾಡುಗಳ ಸಾಹಿತ್ಯದ ಅರ್ಥ ತುಂಬಿದ ಪದಗಳದೇ ಒಂದು ಪಟ್ಟಿಯು ದೊರೆಯುತ್ತದೆ! ಹಾದರ, ಸೂಳೆ ಎಂಬಂಥ ಗ್ರಾಮ್ಯಪದಗಳು ಮತ್ತು ಬೆರಣಿ, ಮಡಿಕೆಯಂತಹ ಜನಸಾಮಾನ್ಯರ ಬಳಕೆಯ ಪದಗಳಿಂದ ಹಿಡಿದು ಕುರುಹು, ಬಯಲು, ತಾದಾತ್ಮ್ಯ, ಇಂಥ ಆಧ್ಯಾತ್ಮಿಕ ಪದಗಳ ವರೆಗೆ ಇವರ ಪದಗಳ ಬಳಕೆ ನಡೆದಿದೆ. ಭಾಷಾ ವಿಚಾರದ ವಿವೇಕವು ಶಿವಶರಣರಲ್ಲಿ ಉನ್ನತವಾದದ್ದು. ಆಧ್ಯಾತ್ಮಿಕ ಅನುಭವಗಳನ್ನು ವರ್ಣಿಸುವಲ್ಲಿ ಅಚ್ಚಗನ್ನಡದಲ್ಲೇ ಇರಬೇಕೆಂಬ ಸಂಕುಚಿತವಾದ ಹಟಕ್ಕೆ ಗುರಿಯಾಗದೆ ಸಂಸ್ಕೃತ ಪದಗಳನ್ನು ಕನ್ನಡಕ್ಕಾಗಿ ದುಡಿಸಿಕೊಂಡಿದ್ದಾರೆ. ಉದಾ ಜಂಗಮ, ಸ್ಥಾವರ, ಲಿಂಗ, ಜ್ಯೋತಿ, ನಿಧಾನ, ಅನುಭಾವ, ಶೂನ್ಯ, ಶೂನ್ಯಸಂಪಾದನೆ, ಕೈವಲ್ಯ, ಅನುಭಾವದಂತಹ ಇಂತಹ ಅನೇಕ ಪದಗಳಿಗೆ ಸಂಸ್ಕೃತದಲ್ಲಿಲ್ಲದ ಅರ್ಥ ಬಾಹುಳ್ಯ ಕನ್ನಡದಲ್ಲಿ ಶಿವದಾಸರಿಂದ ಲಭ್ಯವಾಗಿದೆ ಎನ್ನಬಹುದು.

ಒಂದು ಭಾಷೆಯಲ್ಲಿ ಪದಗಳನ್ನು ಬಳಸುವಾಗ ಅನುಕರಣ ಶಬ್ದಗಳನ್ನು ದ್ವಿರುಕ್ತಿಗಳನ್ನು ಬಳಸುವ ಕ್ರಮವಿದ್ದಂತೆ. ಶಿವದಾಸರ ಅನುಭಾವ ಹಾಡುಗಳಲ್ಲಿ ದ್ವಿರುಕ್ತಿಗಳು ಬಳಕೆಗೊಂಡಿವೆ.

"ಭರಭರದ ಎರವಣೆಯ, ಹರಿವ ಪ್ರಕೃತಿಯ ಜಲದ
ತೆರೆತೆರೆಯ ಲಂಘನೆಯ ಭರಿತನಲ್ಲ
ಶರೀರಧಾರನು ಅಲ್ಲ, ಶಬುದ ಮುಗುದನು ಅಲ್ಲ:
ಪರಗಮನ ರಹಿತ ತಾ ಲಿಂಗೈಕ್ಯನು (ಶಿ.ಗೀ.ಪು.೧೮೦)

ಚೆನ್ನಬಸವಣ್ಣನ ಈ ಹಾಡಿನಲ್ಲಿ 'ಭರಭರ ತೆರೆತೆರೆಯಂತಹ ದ್ವಿರುಕ್ತಿಗಳ ಬಳಕೆಯೂ ಹಾಗೆಯೇ ಅಲ್ಲಮನ ಈ ಹಾಡಿನಲ್ಲಿ

"ಪಶು ಪಶುವಿನಂತಿಹುದು, ತಾನಾ
ಪಶುವಿನೊಳಗಣ ಅಮೃತದಂತಿಹ
ವಿಷಯ ವಿಷಯಗಳಾಗಿಹವು, ತಾನಾ ವಿಷಯದೊಳಗೆ

ವಶಿಸಿಕೊಂಡಿಪ ಜ್ಞಾನದಂತಿಹ

ವಸುಧಾಜಾತದ ಫಲಫಲಾಂತರ

ದೆಸಕ ರುಚಿಯಂತರಾತ್ಮನು ಬೆರಸಿ ಬೇವಹನು" (ಶಿ.ಗೀ., ಪು.೨೧೯)

ಈ ಹಾಡಿನಲ್ಲಿ ಪಶು-ಪಶು, ವಿಷಯ-ವಿಷಯ, ಫಲ-ಫಲದಂತಹ ದ್ವಿರುಕ್ತಿಗಳು ಅನೇಕ ಹಾಡಿನಲ್ಲಿ ಬಳಕೆಗೊಳ್ಳುತ್ತಾ ಬಂದಿವೆ.

ಸಂಖ್ಯಾವಾಚಕ ಪದಗಳು ಶಿವದಾಸರ ಹಾಡುಗಳಲ್ಲಿ ಅಧಿಕವಾಗಿ ಬಳಕೆಗೊಳ್ಳುವಿಕೆಯು ಕಂಡುಬರುತ್ತಿದ್ದು. ಇದೊಂದು ವಿಶೇಷವೇ ಸರಿ. ಷಟ್‌ಸ್ಥಲ, ಅಷ್ಟದಳ, ಪಂಚಾಚಾರ, ಹೀಗೆ ಸಂಖ್ಯಾವಾಚಕ ಶಬ್ದಗಳು ಹಾಡುಗಳಲ್ಲಿ ಕಾಣಸಿಗುತ್ತವೆ. ಅನಾಮಧೇಯ ಸ್ವರವಚನಕಾರನ ಹಾಡಿನಲ್ಲಿ ಹೀಗೆ:

"ಒಂದು ದಳದಲಿ ಪುಣ್ಯ, ಒಂದು ದಳದಲಿ ಪಾದ,

ಒಂದು ದಳದಲಿ ಗಮನ ನಿರ್ಗಮನವು

ಒಂದು ದಳದಲಿ ಅಶನ-ವ್ಯಸನ-ವಿಷಯನಿದ್ರೆ

ಒಂದೊಂದು ದಳದಲೊಂದೊಂದು ಛಂದ!"[2]

ಹಾಗೆಯೇ

ಇಪ್ಪತ್ತೊಂದು ಸಾವಿರದ ಐನೂಱು

(ಹಂಸೋ ಹಂಸೋ) ಎಂಬ ಜಪ ತಾನೆ ಹಂಸ!

ದಿವರಾತ್ರಿಯೆನ್ನದನವರತದಲಿ ಜಪಿಸುವುದು

ಪ್ರಾಣೋಪಾನದೆಡೆಯಲ್ಲಿ ಉದಯ ಕಂಡ! (ಶಿ.ಗೀ.೨೧೮)

ಗುರುಪ್ರಿಯ ಸೋಮನಾಥ ಅಂಕಿತದಲ್ಲಿರುವ ಈ ಹಾಡಿನಲ್ಲಿ ಒಂದು ದಳ, ಇಪ್ಪತ್ತೊಂದು ಸಾವಿರದ ಐನೂಱು, ಎಂಬ ಸಂಖ್ಯಾವಾಚಕಗಳ ಬಳಕೆಯೂ ಕಂಡುಬರುತ್ತದೆ.

ಈ ಹಾಡುಗಳಲ್ಲಿ, ಶಿವನ ಭಕ್ತನು ತಾನು ಮಾಡಬೇಕಾಗಿರುವ ಕ್ರಿಯೆಗಳನ್ನು ಸೂಚಿಸುವ ಸಾವಿರಾರು ಸ್ವರಗೀತೆಗಳು ಶಿವದಾಸರಲ್ಲಿ ಕಂಡುಬರುತ್ತವೆ.

"ಶ್ರೀಗುರು ವಚನೋಪದೇಶವಲಿಸಿ-

ದಾಗಳಹುದು ನರರಿಗೆ ಮುಕುತಿ ||ಪ||

ದುರಿತ ಕರ್ಮವನ್ನೊಲ್ಲದಿರು, ಪುಣ್ಯವನೆಮಾಡು

ಹರನಡಿವಿಡಿ, ಶಾಂತರೊಡನಾಡು

ಕರುಣವಿರಲಿ ಜೀವರೊಳು, ನೀತಿ ವಿದನಾಗು,

ಪೊರೆಪೊರ್ದಿದರನೆಂದು ಬೆಸಸುವ"[3]

ಇಲ್ಲಿ ನಿಜಗುಣಶಿವಯೋಗಿಗಳು ಗುರುವಿನ ಕ್ರಿಯೆಯನ್ನು ಹಾಗೆಯೇ ಶಿಷ್ಯನ ಆದಿಯಾಗಿ ಭಕ್ತನು ಕೈಗೊಳ್ಳಬೇಕಾದ ಅನೇಕ ಕ್ರಿಯೆಗಳನ್ನು ಈ ಗೀತೆಯಲ್ಲಿ ನಿರೂಪಿಸುತ್ತಾರೆ. ನರನಿಗೆ ಮುಕ್ತಿ ದೊರೆಯುವಿಕೆಯೂ ಗುರುವಿನ ಉಪದೇಶದಿಂದ ಭಕ್ತನು ಕೈಗೊಳ್ಳಬೇಕಾದ ಕ್ರಿಯೆಗಳೆಂದೇ ಹೇಳುವ ಈ ಹಾಡಿನಲ್ಲಿ ಕ್ರಿಯಾರೂಪದ ಪದಗಳು ಅಧಿಕವಾಗಿವೆ ಎನ್ನಬಹುದು. ಪುಣ್ಯವನೆ ಮಾಡು, ಶಾಂತರೊಡನೆ ಆಡು, ನೀತಿವಂತನಾಗು, ವಚನೋಪದೇಶ ಆಲಿಸು, ಕೆಟ್ಟ ಕೆಲಸ ಒಲ್ಲದಿರು ಹೀಗೆ ಅನೇಕ ಕ್ರಿಯಾರೂಪದ ಪದಗಳು ಬಳಕೆಗೊಂಡಿವೆ.

ಪ್ರತ್ಯಯ ದೃಷ್ಟಿಯಿಂದ ನೋಡುವುದಾದರೆ ಅನುಭಾವಿಗಳ ಹಾಡುಗಳಲ್ಲಿ ಎಲ್ಲ ಪ್ರತ್ಯಯಗಳ ಬಳಕೆಯೂ ಕಂಡುಬರುತ್ತದೆ. ಆದರೂ ಹೆಚ್ಚಾಗಿ ಬಳಕೆಗೊಳ್ಳುವ ಪ್ರತ್ಯಯಗಳೆಂದರೆ ಪ್ರಥಮ, ಷಷ್ಠಿ, ಚತುರ್ಥಿ, ಪಂಚಮಿ ಪ್ರತ್ಯಯಗಳು ಶಿವದಾಸರ ಪದಗಳಲ್ಲಿ ಕಂಡುಬರುತ್ತವೆ.

"ಸಾಕಾರ ಸಂಗದ ಸುಖದಲ್ಲಿ
ವ್ಯಾಕುಲನ ಮಾಡಿ, ಎನ್ನುವನಿರಿಸದೆ
ಸೂಕ್ಷ್ಮ ಶುದ್ಧಾಂತಕರಣದ ಮೇಲೆ ಕಮ
ಲಾಸನದ ಲಿಂಗದ ಬೆಳಗಿನೊಳಗಿರಿಸು
ಬೇಕೆನ್ನದ ಬೇಡೆನ್ನದ ಪರಿಯನ್ನು
ಸಾಕೆನ್ನದ ಸವಿಯೆನ್ನದ ರುಚಿಯನ್ನು
ಪಾಪ ಪುಣ್ಯಗಳೆಂಬ ಬಯಕೆಗಳ
ಸೋಂಕಿಲ್ಲದೆ ನಿರ್ಲೇಪನಾಗಿರಿಸು" (ಶಿ.ಗೀ.ಪು.೧೯೦)

ಸುಖದಲ್ಲಿ-ಸಪ್ತಮಿ ವಿಭಕ್ತಿ ಪ್ರತ್ಯಯ ಎನ್ನು, ಪರಿಯನ್ನು, ರುಚಿಯನ್ನು ದ್ವಿತೀಯ ವಿಭಕ್ತಿ ಪ್ರತ್ಯಯ, ಸಂಗದ, ವ್ಯಾಕುಲನ, ಬೇಕನ್ನಡ, ಬಯಕೆಗಳ ಷಷ್ಠಿ ವಿಭಕ್ತಿ ಪ್ರತ್ಯಯ. ಬೆಳಗಿನೊಳಗಿಸು, ನಿರ್ಲೇಪನಾಗಿರಿಸು ಪ್ರಥಮ ವಿಭಕ್ತಿ ಪ್ರತ್ಯಯಗಳನ್ನೊಳಗೊಂಡ ಪದಗಳ ಬಳಕೆಯೂ ಶರಣರ ಆದಿಯಾಗಿ ಸ್ವರವಚನಕಾರರ ಸ್ವರ ಗೀತೆಗಳಲ್ಲಿ ಕಂಡುಬರುತ್ತದೆ.

ಶಿವದಾಸರ ಹಾಡುಗಳನ್ನು ಭಾಷೆಯಿಂದ ಗಮನಿಸಬೇಕಾದ ಮತ್ತೊಂದು ವಿಧಾನವೆಂದರೆ ಪ್ರಾಸ. ಶಿವದಾಸರು ಹಾಡಲೆಂದೇ ಹಾಡುಗಳನ್ನು ರಚಿಸಿದರು. ಅವರಿಗೆ ಮುಖ್ಯವಾಗಿ ತಾಳ ರಾಗಗಳಿಗೆ ಸೂಕ್ತವಾಗುವ ದೃಷ್ಟಿಯಿಂದ ಹಾಡುಗಳನ್ನು ರಚಿಸುತ್ತಿದ್ದರಿಂದ ತಾನಾಗಿಯೇ ಪ್ರಾಸದಿಂದ ಹಾಡುಗಳು ರಚಿತವಾದವು. ಪ್ರಾಸಗಳು ಮುಖ್ಯವಾಗಿ, ಮೊದಲಕ್ಷರ ಪ್ರಾಸ, ದ್ವಿತಿಯಕ್ಷರ ಪ್ರಾಸ ಕೃತಿಯಾಕ್ಷರ ಪ್ರಾಸ, ಪದ್ಯಸಾಲಿನ ಕೊನೆಯಾಕ್ಷರ ಪ್ರಾಸಗಳು ಮುಖ್ಯವಾಗಿ ಕಂಡುಬರುತ್ತವೆ.

"ಗುರು ಪರಿಚಯವೆ ಸಕಲ ಜಪಂಗಳು
ಗುರು ಪರಿಚಯವೆ ಸಕಲ ತಪಂಗಳು

ಗುರು ಪರಿಚಯವೆ ಸದ್ಯೋನ್ಮುಕ್ತಿ
ಗುರುಸನ್ನಿಹಿತ ಪರಮಸುಖವು" (ಶಿ.ಗೀ.೨೧೫, ಬಸವಣ್ಣ)

ಈ ಪದ್ಯದಲ್ಲಿ ಮೊದಲಾಕ್ಷರ ಪ್ರಾಸವು ಕಂಡುಬರುತ್ತದೆ. 'ಗುರು' ಶಬ್ದವೂ ಪದ್ಯದ ನಾಲ್ಕು ಸಾಲುಗಳಲ್ಲಿ ನಿರಂತರವಾಗಿ ಪ್ರಥಮ ಪದವಾಗಿ ಕಂಡುಬರುತ್ತಿದೆ. ಅದರಂತೆ 'ಪರಚಯವೆ' ಎನ್ನುವ ಶಬ್ದವೂ ದ್ವಿತೀಯ ಪದಪ್ರಾಸವಾಗಿ ಕಾಣಿಸುತ್ತದೆ. ಆದರೆ ಅದು ಮೊದಲ ಮೂರು ಸಾಲುಗಳಲ್ಲಿ ನಿರಂತರವಾಗಿ ಕಂಡರೂ ನಾಲ್ಕನೇ ಸಾಲಿನಲ್ಲಿ ಕಾಣಸಿಗದು. ಇಲ್ಲಿ ಸ್ವರವಚನಕಾರರಿಗೆ ಪದ್ಯಗಳ ಲಯ ಪ್ರಮುಖವಾಗಿತ್ತೇ ವಿನಃ ಅದರ ಛಂದಸ್ಸಲ್ಲ. ಲಯಕ್ಕೆ ಅನುಗುಣವಾಗಿ ರಾಗಬದ್ಧವಾಗಿ ಪದಗಳನ್ನು ಕಟ್ಟುತ್ತಿದ್ದರು.

"ಬಿಂದು ಕಳೆಯ ಸುಖದ ಶಯದ ಸಂಪರ್ಕನಲ್ಲ
ಒಂದು ಛಂದದಲಿ ಕಂದ ಮೂಲದ ಗೆಲಿದ
ಸಂದಳಿದು ಸ್ವಯ ಸುಖವ ನೊಂದು ಮಾಡಿ, ತ್ರಿ
ಬಂಧ ಭೇದವ ಗೆಲಿದ ನಿಷ್ಕಾಮಿ ಶರಣ" (ಶಿ.ಗೀ.೧೬೭)

ಅಲ್ಲಮಪ್ರಭುವಿನ ಈ ಪದ್ಯದಲ್ಲಿ 'ದ್ವಿತೀಯಕ್ಷರ' ಪ್ರಾಸವು ಪ್ರಮುಖವಾಗಿ ಕಾಣಿಸುತ್ತದೆ. 'ದ' ಅಕ್ಷರವು ಆರಂಭದ ಎರಡನೇ ಅಕ್ಷರ ಪ್ರಾಸವಾಗಿ ಕಾಣಿಸುತ್ತದೆ. ಕೊನೆಯ ಅಕ್ಷರ ಪ್ರಾಸವು ಅಕ್ಕನ 'ನೀನಂಬಿಗ' ಹಾಡಿನಲ್ಲಿ ಹೀಗೆ ಕಾಣಿಸುತ್ತದೆ.

"ಹತ್ತು ಹತ್ತು ನೋಡಂಬಿಗ
ಹತ್ತಿಪರ್ವೈವರು ಅಂಬಿಗ
ಮುತ್ತಿಗೆಗೊಳಗಾದೆನಂಬಿಗ-ಎನ್ನ
ನೆತ್ತಿಕೊಳ್ಳೋ ನಿನಂಬಿಗ (ಶಿ.ಗೀ.೨೪೯)

ಇಲ್ಲಿ 'ಅಂಬಿಗ' ಎನ್ನುವ ಪದವು ಪದ್ಯದ ಕೊನೆಯ ನಾಲ್ಕು ಸಾಲುಗಳಲ್ಲಿ ನಿರಂತರವಾಗಿ ಕಂಡುಬರುತ್ತದೆ. ಅಲಂಕಾರ ದೃಷ್ಟಿಯಿಂದ ಹೇಳುವುದಾದರೆ 'ಯಮಕ'ವೆಂದು ಕರೆಯಲ್ಪಡುವ ಈ ಪ್ರಾಸಬದ್ಧ ಹಾಡಿನಲ್ಲಿ ದ್ವಿತೀಯಾಕ್ಷರ ಪ್ರಾಸವು ಒಳಗೊಂಡಿದೆ ಎನ್ನಬಹುದು ಹೀಗೆ ಅನುಭಾವಿಗಳ ಹಾಡುಗಳಲ್ಲಿನ ಭಾಷೆಯ ಚಮತ್ಕಾರವನ್ನು ನೋಡಬಹುದಾಗಿದೆ.

ಸ್ವರವಚನಗಳು ಗೇಯತೆಯಿಂದ ಕೂಡಿದ ಸಾಹಿತ್ಯವಾಗಿದ್ದು. ಅದನ್ನು ರಾಗ-ತಾಳಗಳಿಗೆ ತಕ್ಕಂತೆ ಅಂದರೆ ಲಯಕ್ಕೆ ತಕ್ಕಂತೆ ಹಿಗ್ಗಿಸಿ ಅಥವಾ ಕುಗ್ಗಿಸಿ ಹಾಡಬಹುದಾಗಿದೆ. ಇವುಗಳು ಮುಖ್ಯವಾಗಿ ಹಾಡುಗಬ್ಬಗಳು. ಈ ಹಾಡುಗಳು ಗೇಯತೆಗೆ ಅಳವಡಿಸಿದ ತಾಳ ಲಯಬದ್ಧ ಪದಗಳು, ವಿವಿಧ ನಿಯಮ, ಕಟ್ಟುಬಂಧಗಳಿಗೆ ಒಳಪಟ್ಟು ಉದ್ದೇಶಪೂರ್ವಕವಾಗಿ ರಚಿಸಬೇಕೆಂದು ರಚಿಸಿದವುಗಳಲ್ಲ. ಸಾಮಾಜಿಕ ಪರಿವರ್ತನೆ, ವೀರಶೈವ ತತ್ತ್ವ ದರ್ಶನ, ದಂತಹ ವಸ್ತುಗಳನ್ನು ಜಾನಪದೀಯ ಹಿನ್ನೆಲೆಯಲ್ಲಿ ಅಂದರೆ ಹಾಡುಗಬ್ಬದ ಮೂಲಕ ಕಟ್ಟಿದರೆ ಹೆಚ್ಚು

ಪರಿಣಾಮಕಾರಿಯಾಗುತ್ತೆಂಬ ಮಹತ್ವಾಕಾಂಕ್ಷೆಯಿಂದ ರಚಿಸಿ ಅವುಗಳನ್ನು ರಾಗಬದ್ಧವಾಗಿ ಹಾಡಲು ರಾಗ ನಿರ್ದೇಶನಗೈದರು. ವಚನಗಳಂತಹ ಓದುಗಬ್ಬದಲ್ಲೇ ಸಾಮಾಜಿಕ ಕ್ರಾಂತಿಗೈದಿದ್ದ ವಚನಕಾರರು ಇನ್ನಷ್ಟು ತೀವ್ರ ಪರಿಣಾಮದ ದೃಷ್ಟಿಯಿಂದ ಈ ಹಾಡುಗಬ್ಬಗಳನ್ನು ರಚಿಸಿದರೆನ್ನಬಹುದು. ಜೇಡರ ದಾಸಿಮಯ್ಯನ ಆದಿಯಾಗಿ ಇಪ್ಪತ್ತನೆಯ ಶತಮಾನ ವಾಗ್ಗೇಯ ಅನುಭಾವಿಗಳವರೆಗೂ ಹಾಡುಗಳ ರಚನೆಯು ಕಂಡುಬರುತ್ತವೆ. ಹೀಗೆ ರಾಗ-ತಾಳಗಳಿಂದ ಹದವರಿತು ಹಾಡಲು ಬರುವ ಈ ಸ್ವರಗೀತೆಗಳು ಛಂದೋಬದ್ಧವಾಗಿ ರಚಿತವಾಗಿಲ್ಲವಾದರೂ ಶ್ರಮಪಟ್ಟು ಗುರುತಿಸಿದಾಗ. ಪ್ರತಿಯೊಂದರ ಮೂಲದಲ್ಲೂ ಒಂದಲ್ಲ ಒಂದು ಛಂದೋರೂಪ ಕಂಡು ಬಂದೇ ಬರುತ್ತದೆ.

ಛಂದಸ್ಸಿನ ದೃಷ್ಟಿಯಿಂದ ಹೇಳುವುದಾದರೆ ಸ್ವರವಚನಗಳಲ್ಲಿ ವರ್ಣ ಛಂದಸ್ಸು. ಮಾತ್ರಾಛಂದಸ್ಸು ಮತ್ತು ಅಂಶಛಂದಸ್ಸಿನ ಬಳಕೆ ಇರುವುದು ಕಂಡುಬರುತ್ತದೆ, ಆದರೆ ಅಧಿಕ ಅಂಶಗಣಾನ್ವಿತ ಛಂದಸ್ಸು ಅಧಿಕವಾಗಿ ಬಳಕೆಗೊಂಡಿದೆಯೆನ್ನಬಹುದು. ಸ್ವರಗೀತೆಗಳು ಹಾಡಿನ ಮಟ್ಟುಗಳಾದ್ದರಿಂದ ಮಾರ್ಗಸಾಹಿತ್ಯ ಪ್ರಕಾರ ಛಂದಸ್ಸು ಅಕ್ಷರ ಛಂದಸ್ಸಿನ ಬಳಕೆಯೂ ಕಡಿಮೆ ಪ್ರಮಾಣ, ಅಂದರೆ ಬಹಳ ವಿರಳವಾಗಿ ಕಂಡುಬರುತ್ತದೆ. ಹದಿನೈದನೇ ಶತಮಾನದ ತರುವಾಯದ ಕವಿಗಳಾದ ಶಂಕರದೇವರು, ಮೈಲಾರಬಸವಲಿಂಗ ಶರಣರು. ಮಲ್ಲಿಕಾಮಾಲೆ, ವಿದ್ಯುನ್ಮಾಲಾ, ಇಂದ್ರವಜ್ರ ಸುಲಭ, ಚಿತ್ರಪದ ಮತ್ತು ಶಶಿಕಾಂತ ಇವನ್ನು ಬಳಸಿದ್ದಾರೆ.

"೧. ಮಲ್ಲಿಕಾಮಾಲೆ (ಶಂಕರದೇವಾ, ರಸಜಭರ)

ಏನ, ಮಾಡುವೆ, ನೀಮ ನಂತ್ರಿವಿ, ಧಪ್ರ, ಸಾದವ.ನೊಲ್ಲದು ೩.೪.೩.೪.೩.೪.೩.ಗು

೨. ವಿದ್ಯುನ್ಮಾಲಾ (ಮೈಲಾರ ಬಸವಲಿಂಗ ಶರಣ, ಮಮಗಗ)

ಶಾಂತಂ, ಸತ್ಯಾ, ರೂಢಂ, ಪಾದಾ, ೪೪೪೪"

ಇಲ್ಲಿ ಬಳಸಲಾಗಿರುವುದು ಮಾತ್ರಾಗತಿಗೆ ಹೊಂದುವ ಬಂಧಗಳು ಎಂಬುದನ್ನು ಸ್ಪಷ್ಟವಾಗಿ ಗುರುತಿಸಬಹುದು.

ಶರಣರ ಹಾಡುಗಳಲ್ಲಿ ಬಳಕೆಯಾಗಿರುವ ಮಾತ್ರ ಛಂದೋರೂಪಗಳಲ್ಲಿ ಮೊದಲಿಗೆ ಷಟ್ಪದಿಗಳು ಪ್ರಧಾನವಾಗಿ ಕಾಣುತ್ತವೆ. ಅದರಲ್ಲಿ ಆರು ಪ್ರಕಾರ ಷಟ್ಪದಿಗಳು ಬಳಕೆಗೊಂಡಿವೆ. ಇವಲ್ಲದೆ ರಗಳೆ, ಮಾನೌಮಿ, ಚೌಪದ, ಮಾತ್ರಾಲಯಕ್ಕೆ ತಿರುಗಿದ ದ್ವಿಪದಿಯೂ ಕಂಡುಬರುತ್ತವೆ. ಈ ಎಲ್ಲ ಬಂಧಗಳಿಗಿಂತ ಷಟ್ಪದಿಗಳಿಂದ ರೂಪಿತವಾದ ಬಂಧಗಳು ಅತಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಷಟ್ಪದಿಗಳನ್ನು ಔಪಧಿಗಳಾಗಿ ಬಳಸಿರುವುದು ಅಧಿಕವಾಗಿ ಕಂಡುಬರುತ್ತದೆ. ಎಲ್.ಬಸವರಾಜು ಪೂರ್ವ ಪೀಠಿಕೆ ಭಾಗದಲ್ಲಿ ತಾಳೆ ನೋಡಲೆಂದು ಕೊಟ್ಟಿರುವ ಬಂಧವು ಅದನ್ನು ಸ್ಪಷ್ಟಪಡಿಸುತ್ತದೆ.

| | | | |
|---|---|---|---|
| ಷಟ್ಪದಿ: | ವಿ+ವಿ | ಚೌಪದಿ: | ವಿ+ವಿ+ವಿ+ವಿ |
| | ವಿ+ವಿ | | ವಿ+ವಿ+ರು |
| | ವಿ+ವಿ | | ವಿ+ವಿ+ವಿ+ವಿ |

ವಿ+ವಿ ವಿ+ವಿ+ರು

ವಿ+ವಿ+ರು

ಮಾತ್ರ ವಿನ್ಯಾಸದಲ್ಲಿ ಅದನ್ನು ಗಮನಿಸಬಹುದಾಗಿದೆ. ಶರಷಟ್ಪದಿಯಿಂದ ಶರ ಚೌಪದಿ:

ಪಂಜರವೆಂಬುದು ಮಂಜಿನ ಪುಂಜವು ೪ : ೪ : ೪ : ೪

ಪಂಜರದೊಳಗಿಪ್ಪ ನಾದ ಬಿಂದು ೪ : ೪ : ೪ : ಗು

ಮಂಜರ ಕೊಲ್ಲುವ ಕುಂದಾಗದ ಮುನ್ನ ೪ : ೪ : ೪ : ೪

ಅಂಜದೆ ನೆಲುಕಂಡಾ, ರಾಮಿತಂದೆ ೪ : ೪ : ೪ : ಗು (ಶಿ.ಗೀ.೨೫೦)

ಹೀಗೆ ಕುಸುಮ ಷಟ್ಪದಿಯ ಛಂದೋವಿನ್ಯಾಸವನ್ನು ಕುಸುಮ ಚೌಪದಿಯ ವಿನ್ಯಾಸದಲ್ಲಿ ತಿರುಗಿಸುವುದು ಶಿವದಾಸರ ಹಾಡುಗಳಲ್ಲಿ ಅಧಿಕವಾಗಿ ಕಂಡುಬರುತ್ತದೆ. ಅಕ್ಕಮಹಾದೇವಿ, ನಿಜಗುಣಶಿವಯೋಗಿ, ಗುರುಬಸವ, ನೀಲಲೋಚನೆ, ಮುಂತಾದ ಶರಣರ ಹಾಡುಗಳು ಷಟ್ಪದಿಯ ವಿನ್ಯಾಸದಿಂದ ಚೌಪದಿ ವಿನ್ಯಾಸ ಪಡೆದುಕೊಂಡಿರುವುದನ್ನು ಕಾಣಬಹುದು.

"ತನುವೆಂಬ ಮನೆಯೊಳಗೆ ನೆಲಸಿರ್ಪ ಪರಮಾತ್ಮ ೫ : ೫ : ೫ : ೫

ಮನೆಯ ದೇವರ ಹಬ್ಬ ಆ ಹಬ್ಬ ಕಿಂದು ೫ : ೫ : ೫ : ಪ

ನೆನೆಯದೇ ಮಿಂದು ನಡೆಯದೆ ಹೋಗಿ ಬಲಗೊಂಡು ೫ : ೫ : ೫ : ೫

ನೆನಹಿನ ಮೃತಾನದು ಪಹಾರವೀಡಬೇಕು (ಶಿ.ಗೀ.೧೧೮) ೫ : ೫ : ೫ : ಪ"[೨೦]

(ಅಕ್ಕಮಹಾದೇವಿ)

ಹೀಗೆ ವಿವಿಧ ರೂಪದ ಷಟ್ಪದಿಗಳು ಚೌಪದಿಗಳಾಗಿರುವುದು ಅಧಿಕವಾಗಿ ಶಿವಶರಣರ ಹಾಡುಗಳಲ್ಲಿ ಕಂಡುಬರುತ್ತವೆ. ಇಲ್ಲಿ ಷಟ್ಪದಿಗಳ ಮಾತ್ರಾಲಯಗಳನ್ನು ಹಾಡಿನ ಲಯದ ದೃಷ್ಟಿಯಿಂದ ಚೌಪದಿಗಳಾಗಿ ವಿಂಗಡಿಸಿದ್ದಾರೆ. ಚೌಪದಿಯ ಎರಡನೇ ಸಾಲಿನ ಕೊನೆಯಲ್ಲಿ ಗುರುಬರಬೇಕು ಆದರೆ ಕೆಲ ಸ್ವರಗೀತೆಗಳಲ್ಲಿ ಅಂದರೆ ಭೋಗ ಚೌಪದಿಯಂತಹ ನುಡಿಯಲ್ಲಿ ಪಾದದ ಕೊನೆಗೆ ಗುರುವಿನ ಬದಲು ಎರಡು ತ್ರಿಮಾತ್ರಾಗಣಗಳನ್ನು ತಂದಿರುವಿಕೆಯೂ ಕುಸುಮ ಚೌಪದಿಯಲ್ಲಿ ಪಂಚ ಮಾತ್ರಾಗಣವನ್ನು ಗುರುವಿನ ಸ್ಥಾನದ ಬದಲಾಗಿ ತಂದಿರುವುದು ಬಹಳವಾಗಿ ಕಂಡುಬರುತ್ತದೆ.

ರಗಳೆಗಳ ಪೈಕಿ ಹೇಳುವುದಾದರೆ ಮಂದಾನಿಲ ಮತ್ತು ಲಲಿತ ರಗಳೆಗಳು ಚೌಪದಿಗಳಾದುದು ಅಲ್ಲಲ್ಲಿ ಬಳಕೆಯಾಗಿದೆ.

"ಶಶಿ ಕಲಾಧರ ನಿನ್ನ ವಿಕೃತಿಯಾ ೩ : ೪ : ೩ : ೪

ಳೆಸೆವು ತೆನ್ನೈ ದಿಂದ್ರಿಯಂಗಳು ೩ : ೪ : ೩ : ೪

ಮುಸುಗುತಿಹದನೆ ಬೇಡುವೆನು ಸಂ ೩ : ೪ : ೩ : ೪

ಸತದಿಕೊಂಡು ವರವಿದನೆ ದೇವಾ        ೩ : ೪ : ೩ : ೪

ಭಾಮಿನಿ ರಗಳೆ        ಸರ್ವಭೂಷಣ ಶಿವಯೋಗಿ

ಷಟ್ಪದಿ ಛಂದಸ್ಸು ಬದಲಾವಣೆಯ ರೂಪವನ್ನು ಪಡೆದು ಚೌಪದಿಗಳಾಗಿದ್ದು ಹಿಂದೆ ನೋಡಲಾಗಿದೆ. ಆದರೂ ಕೆಲವು ಕಡೆ ಷಟ್ಪದಿಯ ರೂಪಗಳು ಕಾಣಸಿಗುತ್ತವೆ. ಆ ಷಟ್ಪದಿಯು ಮಾತ್ರಾ ಛಂದಸ್ಸಿನಿಂದ ಕೂಡಿವೆ. ವಚನಕಾರ ಕಾಲಕ್ಕೆಲ್ಲ ಅಂಶಛಂದಸ್ಸು ಮಾತ್ರ ರೂಪವನ್ನು ಪಡೆದುಕೊಳ್ಳುತ್ತಿದ್ದರಿಂದ ಶಿವಶರಣರ ಹಾಡುಗಳಲ್ಲಿ ಅಲ್ಲಲ್ಲಿ ಮಾತ್ರಛಂದಸ್ಸಿನ ಷಟ್ಪದಿಗಳು ಕಂಡುಬರುತ್ತವೆಯೆನ್ನಬಹುದು.

ಎಸೆವ ಹಲವು ಮುಖದ ಭೇದ        ೩ : ೩ : ೩ : ೩

ವರೆದು ದರಿಸೆ ಬ್ರಹ್ಮ ಹತ್ಯೆ        ೩ : ೩ : ೩ : ೩

ಪಶುವಿ ಘಾತ ಭ್ರೂಣ ಹತ್ಯ ಪಾಪ ನಾಶನ        ೩ : ೩ : ೩ : ೩ : ೩ : ೩ : ಗು

ಒಸೆದು ಚಿತ್ತ ಶುದ್ಧಿಯಿಂದ        ೩ : ೩ : ೩ : ೩

ಜಪಿಸಿದಾತ ರುದ್ರನೆಂದು        ೩ : ೩ : ೩ : ೩

ವಸುದೆಯೊಳು ಸಾರುತಿಹದು ವೇದ ವಾಕ್ಯವು        ೩ : ೩ : ೩ : ೩ : ೩ : ೩ : ಗು

(ಶಿ.ಗೀ.ಪು.೧೪೦)

ಭೋಗ ಷಟ್ಪದಿಯಲ್ಲಿ ರಚಿತವಾದ ಈ ಪದ್ಯದ ಮೊದಲ ಸಾಲಿನಲ್ಲಿ ನಾಲ್ಕು ಗಣಗಳು ಮೂರನೇ ಸಾಲಿನಲ್ಲಿ ರಚಿತವಾದ ಈ ಪದ್ಯದ ಮೊದಲ ಸಾಲಿನಲ್ಲಿ ನಾಲ್ಕು ಗಣಗಳು ಮೂರನೇ ಸಾಲಿನಲ್ಲಿ ಮೂರು ಮಾತ್ರೆ ಲಘು ಬಂದರೂ ಗುರುವಾಗಿ ಗುರುತಿಸಲ್ಪಡುತ್ತದೆ. ಆದರೆ ಈ ಷಟ್ಪದಿಯ ಕೊನೆಯ ಸಾಲಿನ ಮಾತ್ರೆಯ ದೃಷ್ಟಿಯಿಂದ ಅಲ್ಪ ವ್ಯತ್ಯಾಸವು ಕಂಡುಬರುತ್ತದೆ. ರಚನೆಯ ದೃಷ್ಟಿಯಿಂದ 'ವಸುದೆ ಒಳಗೆ' ಎಂದು ಮಾಡಿಕೊಂಡಾಗ ಸರಿಯಾಗಬಹುದು.

**ಭಾಮಿನಿ ಷಟ್ಪದಿಗೆ**

ಹಂಸ ಪವನರು ದಳದಂಗಳೊ        ೩ : ೪ : ೩ : ೪

೪ಂಕಶಿಕದೊಳೊಡಗೂಡಿ ಆತ್ಮನೂ        ೩ : ೪ : ೩ : ೪

೪ಂ ಸಮಾಹಿತಮಾಗಿ ತೊಳಗುವ ಜ್ಯೋತಿ ರೂಪಕವು        ೩ : ೪ : ೩ : ೪ : ೩ : ೪

ಸಂಶಯದ ಸಂಸಾರ ಕಾಯದೊ        ೩ : ೪ : ೩ : ೪

೪ಂ ಸಿಲುಕಿ ಮಹಭೂತಗೂಡಿ        ೩ : ೪ : ೩ : ೪

ದ್ರು೦ ಸಹಜ ಬೇರಾಗಿ ಸಚರಾಚರವ ಚರಿಸುತಿಹ        ೩ : ೪ : ೩ : ೪ : ೩ : ೪

(ಪುಷ್ಪದ ಸೋಮಯ್ಯ ಶಿ.ಗೀ.೨೧೮)

ಪ್ರಾರಂಭದ ಮೂರು ಸಾಲು ಛಂದಸ್ಸಿನ ಅನುಗುಣವಾಗಿ ಕಂಡುಬರುತ್ತವೆ. ಆದರೆ ಆರನೇ ಸಾಲಿನಲ್ಲಿ ಛಂದಸ್ಸಿನ ಲಯವು ಅಂದರೆ ಮಾತ್ರೆಯ ದೃಷ್ಟಿಯಿಂದ ವ್ಯತ್ಯಾಸ ಕಂಡುಬರುತ್ತದೆ.

**ಪರಿವರ್ಧಿನಿ ಷಟ್ಪದಿ**

ನುಡಿಯಲಿ ಎರಡಿಟ್ಟು ನುಡಿಯನು ಬೆಡಗಿನ ೪ : ೪ : ೪ : ೪
ಗಡಣದ ಕುಲವನು ಕಂಡರಿಯನು ಮತ್ತೆ ೪ : ೪ : ೪ : ೪
ಹಿಡಿಯನು ಕಲತಕವ, ತನ್ನನುವನು ತೋರು ಡಂಬಿಕ್ಕುವನಲ್ಲ ೪ : ೪ : ೪ : ೪ : ೪ : ೪
ತುಡುಗುಣಿತನದಿಂದ ಲೋಕದನಿಳಕೆಯ ೪ : ೪ : ೪ : ೪
ತುಡುಕುವನಲ್ಲ ತನ್ನ ತೋರಿಸು ಬೀರಿನು ೪ : ೪ : ೪ : ೪
ಜಡನಲ್ಲ ಜಾಣನಲ್ಲ ತನ್ನಲ್ಲಿಯೇ ತಾನೆ ನಿಂದ ಸಹಜನು ೪ : ೪ : ೪ : ೪

ಹಾಗೆಯೇ,

ತನ್ನಯ ನೆಳಲಿಗೆ ತಾನೇ ಮುನಿವನು ೪ : ೪ : ೪ : ೪
ತನ್ನಯ ನೆಳಲಿಗೆ ತಾನೇ ನಗುವನು ೪ : ೪ : ೪ : ೪
ತನ್ನಯ ಹಮ್ಮುಗು ತಾನೇ ನಿಂದಿಸಿ, ತಾನಿಲ್ಲದ ಮಹಿಮ ೪ : ೪ : ೪ : ೪ : ೪ : ೪

(ನಿಜಗುಣಶಿವಯೋಗಿ, ಶಿ.ಗೀ.೨೪೬)

**ವಾರ್ಧಕ ಷಟ್ಪದಿಗೆ**

ತನ್ನ ಮಾಟಕೆ ತಾನೆ ಮುಯ್ಯಾನ ದಾಸೋಹಿ ೫ : ೫ : ೫ : ೫
ಸನ್ನಹಿತನೆಂಬ ಹೊಗಳತೆಯ ಹೋಮ, ಪರರಹಳಿ ೫ : ೫ : ೫ : ೫
ವನ್ನಾಯ ಕೆಳಸಹಂಕಾರ ವಳಿದೇನುವಂ ತಾನೆನ್ನ ತನಗೆನ್ನನು ೫ : ೫ : ೫ : ೫ : ೫ : ೫

(ಚೆನ್ನಬಸವಣ್ಣ, ಶಿ.ಗೀ.೧೪೫)

ಹೀಗೆ ಶರಣರ ಹಾಡುಗಳನ್ನು ಅವಲೋಕಿಸಿದಾಗ ಮಾತ್ರ ಛಂದಸ್ಸಿನ ಛಂದೋರೂಪದ ಪದ್ಯಗಳು ಅಲ್ಲಲ್ಲಿ ಕಂಡುಬರುತ್ತವೆ. ಒಂದು ಪದ್ಯದಲ್ಲಿ ಅಂದರೆ ಹಾಡಿನಲ್ಲಿ ಎಲ್ಲ ಪದ್ಯಗಳು ಛಂದೋರೂಪದಿಂದ ಕೂಡಿರಬೇಕೆಂಬ ನಿಯಮವೂ ಶರಣರ ಹಾಡುಗಳಲ್ಲಿ ಕಂಡುಬರುವುದಿಲ್ಲ. ಅವರದು ಲಯಪ್ರಧಾನ ಹಾಡುಗಳ ಸ್ವರೂಪ, ಅಲ್ಲಿ ಲಯವನ್ನು ಕಂಡುಕೊಳ್ಳಬಹುದೇ ವಿನಃ ಛಂದಸ್ಸನ್ನು ಅಲ್ಲವೆನ್ನಬಹುದು.

ಅಂಶ ಛಂದಸ್ಸಿಗೆ ಸಂಬಂಧಿಸಿದಂತೆ ಹೇಳುವುದಾದರೆ, ವಾಚಕ ಮತ್ತು ಲಿಖಿತರೂಪದಲ್ಲಿ ಹರಿದುಬಂದಿರುವ ಹಾಡುಗಳು ಆಯಾ ಕಾಲಕ್ಕೆ ರೂಢಿಯಲ್ಲಿಯ ಗೇಯಪ್ರಧಾನ ತ್ರಿಪದಿ, ಚೌಪದಿ, ಷಟ್ಪದಿ, ಅಕ್ಕರ, ಸಾಂಗತ್ಯದಂತಹ ಕನ್ನಡ ಛಂದೋಬಂಧಗಳಲ್ಲಿ ರಚನೆಯು ಕಂಡುಬರುತ್ತದೆ. ಶರಣರ ಹಾಡುಗಳು ರಾಗ ಲಯ ಪ್ರಧಾನವಾದ ಗೇಯಗುಣವನ್ನು ಒಳಗೊಂಡಿರುವಂತಹವು. ಆದ್ದರಿಂದ ಹಾಡುಗಳಲ್ಲಿ ಛಂದಸ್ಸಿನ ದೃಷ್ಟಿಯಿಂದ ಅಂಶಗಣ

ಛಂದಸ್ಸು ಅಧಿಕ ಪ್ರಮಾಣದಲ್ಲಿ ದೊರೆಯುತ್ತದೆ. ಹಾಡುಗಳಲ್ಲಿ ಕಂಡುಬರುವ ಛಂದಸ್ಸು ಕಣ್ಣಿಗೆ ಕಾಣುವ ಛಂದಸ್ಸಲ್ಲ. ಕಿವಿಗೆ ಕೇಳುವ ಛಂದಸ್ಸೆಂದೇ ಹೇಳಬಹುದು, ಇಲ್ಲಿ ಲಯ ಪ್ರಧಾನವೇ ಹೊರತು. ಮಾತ್ರೆ ಗಣಗಳಲ್ಲ.

ಕನ್ನಡ ಛಂದೋಬಂಧಗಳಲ್ಲಿ ಕೆಲಕಡೆ ಸಣ್ಣಪುಟ್ಟ ಬದಲಾವಣೆಗಳನ್ನು ಬಿಟ್ಟರೆ ಉಳಿದಂತೆ ಸಾಮ್ಯತೆಯೂ ಅಧಿಕವಾಗಿ ಕಂಡುಬರುತ್ತದೆ. ಎಲ್.ಬಸವರಾಜು ಪೀಠಿಕಾ ಭಾಗ (ಪು.ರಾ.ವಿ.೧೨೧)ರಲ್ಲಿ ಸಾಂಗತ್ಯ ಮತ್ತು ವೀರಚೌಪದಿಯ ಲಕ್ಷಣವನ್ನು ತಾಳೆ ನೋಡುವ ದೃಷ್ಟಿಯಿಂದ ನೀಡಿದ್ದಾರೆ. ಅವನ್ನು ಗಮನಿಸಿದಾಗ.

| **ಸಾಂಗತ್ಯ** | **ವೀರಚೌಪದಿ** |
|---|---|
| ವಿ : ವಿ : ವಿ : ವಿ | ವಿ : ವಿ : ವಿ : ವಿ |
| ವಿ : ವಿ : ಬ್ರ | ವಿ : ವಿ : ರು |
| ವಿ : ವಿ : ವಿ : ವಿ | ವಿ : ವಿ : ವಿ : ವಿ |
| ವಿ : ವಿ : ಬ್ರ | ವಿ : ವಿ : ರು |

ಈ ಎರಡು ಛಂದೋಬಂಧಗಳಲ್ಲಿ ಎರಡನೇ ಸಾಲಿನ ಮೂರನೇ ಪಾದದಲ್ಲಿ ಬ್ರಹ್ಮ ಬದಲು ರುದ್ರಗಣವು ವೀರಚೌಪದಿಯಲ್ಲಿ ಕಂಡುಬರುತ್ತಿದೆ. ಸಾಂಗತ್ಯ ಮತ್ತು ವೀರಚೌಪದಿಗಳನ್ನು ನೋಡಿದ ತಕ್ಷಣ ವ್ಯತ್ಯಾಸ ಗುರುತಿಸುವುದು ಕಷ್ಟಸಾಧ್ಯ, ಆದರೆ ಹಾಡಿದಾಗ ಮಾತ್ರ ಅವುಗಳ ಸೂಕ್ಷ್ಮ ವ್ಯತ್ಯಾಸವನ್ನು ಇಲ್ಲವೆ ಪ್ರಸ್ತಾರ ಹಾಕುವುದರ ಮೂಲಕ ಗುರುತಿಸಬಹುದಾಗಿದೆ. ಹಾಗೆಯೇ ವೀರಚೌಪದಿಯ ಲಯವನ್ನು ಒಡೆದು ಷಟ್ಪದಿಯ ರೂಪವನ್ನು ಸಹ ಮಾಡಬಹುದಾಗಿದೆ.

| | |
|---|---|
| "ಲಿಂಗಭಾವನೆ ಭಾವಲಿಂಗ ಪ್ರಾಣವೆ ಪ್ರಾಣ | ವಿ : ವಿ : ವಿ : ವಿ |
| ಲಿಂಗ ದಂಗದೊಳಂಗ ಬೇಡಲ್ಲದೆ | ವಿ : ವಿ : ರು |
| ಲಿಂಗಸಂಗವೆ ಸಂಗ ಸ್ವಯವಾಗಿ ಕೂಡಲ | ವಿ : ವಿ : ವಿ : ವಿ |
| ಸಂಗನಿಮ್ಮೊಳು ಕೂಡಿ ಸುಖಿಯಾದೆನು | ವಿ : ವಿ : ರು" |
| | (ಶಿ.ಗೀ. ಪು. ೧೩೪) |

ಹೀಗೆ ಚೌಪದಿ ಲಕ್ಷಣಕ್ಕೆ ಹೊಂದಿಕೊಳ್ಳುವ ಈ ಪದ್ಯವು ಐದೈದು ಮಾತ್ರೆಯ ಗಣಗಳನ್ನು ಹಾಕಿ ಪ್ರಸಾರ ಮಾಡಿದರೆ ಕುಸುಮ ಷಟ್ಪದಿಯು ಆಗುತ್ತದೆ.

| | |
|---|---|
| "ಲಿಂಗ ಭಾವನೆ ಭಾವ | ವಿ : ವಿ |
| ಲಿಂಗ ಪ್ರಾಣವೆ ಪ್ರಾಣ | ವಿ : ವಿ |
| ಲಿಂಗ ದಂಗದೊಳಂಗ ಬೇಡಿಲ್ಲದೆ | ವಿ : ವಿ : ರು |
| ಲಿಂಗ ಸಂಗವೆ ಸಂಗ | ವಿ : ವಿ |
| ಸ್ವಯದಾಗಿ ಕೂಡಲ | ವಿ : ವಿ |
| ಸಂಗನಿಮ್ಮೊಳು ಕೂಡಿ ಸುಖಿಯಾದೇನು | ವಿ : ವಿ : ರು" |

ಇಲ್ಲಿ ಐದನೇ ಪಾದ, ಎರಡನೇ ಪದವು ನಾಲ್ಕು ಮಾತ್ರೆಯಿಂದ ಕೂಡಿದ್ದು, ಬಿಟ್ಟರೆ ಉಳಿದೆಲ್ಲ ಐದು ಮಾತ್ರೆಯಿಂದ ಕೂಡಿದ ಕುಸುಮ ಷಟ್ಪದಿಯಾಗಿದೆ. ಮುಖ್ಯವಾಗಿ ಈ ಮೇಲಿನ ಪದ್ಯವು ತಿಳಿಯಪಡಿಸುವುದು ಅಂಶಗಣಮಿಶ್ರ ಅಂಶಗಳಿಂದ ಕೂಡಿದ ಈ ಪದ್ಯವನ್ನು ಲಯಕ್ಕೆ ಅನುಗುಣವಾಗಿ ಬದಲಾಯಿಸಲುಬಹುದು. ಈ ವಿಶಿಷ್ಟ ಗುಣ ಶರಣರ ಹಾಡುಗಳಿಗೆ ಇದೆ.

ಏಳೆ ಛಂದಸ್ಸಿನ ಲಕ್ಷಣಗಳು ಒಂದೆರಡು ಹಾಡುಗಳಲ್ಲಿ ಕಂಡುಬರುತ್ತವೆ. ಸಿದ್ಧರಾಮನ ಹಾಡುಗಳಲ್ಲಿ 'ಏಳೆ' ಲಕ್ಷಣಗಳನ್ನು ಕಾಣಬಹುದು.

| | |
|---|---|
| ನಮ್ಮ ಕಪಿಲಸಿದ್ಧ ಮಲ್ಲೇಶ್ವರಯ್ಯನ | ವಿ : ವಿ : ವಿ : ವಿ |
| ಬಗಿ ಬಿಗಿದಪ್ಪಿ ಕೊಳ್ಳಿರೋ | ವಿ : ಬ್ರ : ವಿ |
| | (ಸಿದ್ಧರಾಮ, ಶಿ.ಗೀ. ೩೦೦) |

ಹಾಗೆಯೇ ಸಿದ್ಧಾರಾಮನ ಮತ್ತೊಂದು ಸ್ವರಗೀತೆಯೂ ಇದೇ ಲಕ್ಷಣವನ್ನು ಒಳಗೊಂಡಿದೆ ಎನ್ನಬಹುದು. ಆದರೆ ಅಂಶಗಳ ದೃಷ್ಟಿ ಅಧಿಕ ಅಂಶಗಳು ಬರುತ್ತವೆ.

| | |
|---|---|
| ಅಪರಾಪರವ ದಾಂಟಿ ಸುಪರಾಪರವ ಮೀಱಿ | ವಿ : ವಿ : ವಿ : ವಿ |
| ವಿಪರೀತವಾದ ನಿರ್ವಾಣ ಲಿಂಗದತ್ತ | ವಿ : ಬ್ರ : ವಿ |

ಈ ಪದ್ಯದಲ್ಲಿ ಮೊದಲ ಸಾಲಿನಲ್ಲಿ ಅಂಶಗಳು ಏಳೆಯ ಲಕ್ಷಣವನ್ನು ಪಡೆದುಕೊಂಡಿವೆ. ಆದರೆ ಎರಡನೇ ಸಾಲಿನಲ್ಲಿ ಸರಿಯಿದ್ದ ಅಧಿಕ ಗಣವು ಬರುತ್ತಿದೆ.

ತ್ರಿಪದಿ ಲಕ್ಷಣಗಳಿಂದ ಕೂಡಿದ ಕೆಲ ಪದ್ಯಗಳು ಶಿವಶರಣರ ಹಾಡುಗಳಲ್ಲಿ ಕಂಡುಬರುತ್ತವೆ. ಆದರೆ ಅವುಗಳನ್ನು ಲಯಕ್ಕೆ ಅನುಗುಣವಾಗಿ ಬದಲಾಯಿಸಿದಾಗ ಬೇರೊಂದು ಛಂದೋರೂಪವನ್ನು ಪಡೆದುಕೊಳ್ಳುತ್ತದೆ. ಬಸವಣ್ಣ, ಅಕ್ಕಮಹಾದೇವಿ, ಸಕಲೇಶ ಮಾದರಸ, ಅಲ್ಲಮನ ಹಾಡುಗಳಲ್ಲಿ ಅಲ್ಲಲ್ಲಿ ತ್ರಿಪದಿಗಳು ಕಂಡುಬರುತ್ತವೆಯಾದರೂ ಅಂಶ ತ್ರಿಪದಿಗೆ ಬಹುತೇಕ ಎಲ್ಲವು ಸರಿಹೊಂದುವುದಿಲ್ಲ. ಅತ್ತ ಮಾತ್ರಾಗಣಕ್ಕೂ ಹೊಂದಿಕೆಯಾಗುವುದಿಲ್ಲ. ಎಲ್. ಬಸವರಾಜು ತಾಳೆಗಾಗಿ ಕೊಟ್ಟ ಉದಾಹರಣೆ ಪದ್ಯವೊಂದೇ ಸರಿಯಾದ ಅಂಶ ತ್ರಿಪದಿಯ ಲಕ್ಷಣ ಪಡೆದುಕೊಂಡಿದೆ.

| | |
|---|---|
| "ಸಂಪಗೆಯ ಮರನ ನೇರೆ ಪರಿಮಳದ | ವಿ : ವಿ : ವಿ : ವಿ |
| ಕಂಪಕೊಯ್ಯ ನಾರಲೋ ಇಂಪುಳ್ಳ | ಬ್ರ : ಬ್ರ : ವಿ : ವಿ |
| ಜಾಣನಲ್ಲಮಕಾಣೆ ಕೆಳದಿ | ವಿ : ಬ್ರ : ವಿ |
| | (ಶೀ.ಗೀ. ನುಡಿ, ಪು. ೭೩೪) |

ಇದೇ ಮಾದರಿಯ ಕೆಲ ಹಾಡುಗಳು ಶಿವದಾಸ ಗೀತಾಂಜಲಿಯ ಹಾಡು (೧೫, ೪೦, ೧೧೨, ೧೧೯, ೧೨೬) ಇವೆ. ಆದರೂ ಅವುಗಳಲ್ಲಿ ಶುದ್ಧ ತ್ರಿಪದಿಯ ಲಕ್ಷಣಗಳಿಲ್ಲ. ಕೇವಲ ಮೂರು ಸಾಲಿನ ಪದ್ಯವೆಂದು ಮಾತ್ರ ಪರಿಗಣಿಸಬಹುದು.

"ತನುವೆನಗಿಲ್ಲಯ್ಯಾ ತನುವೀವಡೆ
ಮನವೆನಗಿಲ್ಲಯ್ಯಾ ಮನವೀವಡೆ
ಧನವೆನಗಿಲ್ಲಯ್ಯಾ ಧನವೀವಡೆ, ಸರ್ವವು ನಿಮ್ಮದಾಗಿ"   (ಬಸವಣ್ಣ, ಶಿ.ಗೀ. ಪು. ೧೫೧)

ಇಲ್ಲಿ ಅಧಿಕ ಅಂಶಗಣಗಳು ಕಂಡುಬರುತ್ತವೆಯೆನ್ನಬಹುದು.

ಇನ್ನೊಂದು ದೇಶಿಮಟ್ಟಾದ ಸಾಂಗತ್ಯದ ಬಳಕೆಯು ಶಿವಶರಣರ ಅನುಭಾವಿಗಳ ಹಾಡುಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಈ ಬಗೆಯ ಛಂದಸ್ಸಿನ ಕೆಲ ಲಕ್ಷಣಗಳು ಹೆಚ್ಚಾಗಿ ಹದಿನೈದನೇ ಶತಮಾನದ ತರುವಾಯದ ಅನುಭಾವಿಗಳ ಹಾಡುಗಳಲ್ಲಿ ಅಧಿಕವಾಗಿ ಕಂಡುಬರುತ್ತವೆಯಾದರೂ ಅವೇ ಸ್ಪಷ್ಟವಾದ ಸಾಂಗತ್ಯ ರೂಪಗಳ ಲಕ್ಷಣಗಳನ್ನು ಹೊಂದಿಲ್ಲವೆನ್ನಬಹುದು.

| | |
|---|---|
| ಮನದ ಕೊನೆಯ ಮನೆಯೊಳು ಗುಪ್ತ ಮುಖವಾಗಿ | ವಿ : ವಿ : ವಿ : ವಿ |
| ಕನಸಕಾ ಬವನೀನೊ ನುನೊ | ವಿ : ವಿ : ಬ್ರ |
| ಅನುದಿನ ಅರುವುದು ಜವೆಯೊಳು ಗುಳೆಮಾಳ್ಪ | ವಿ : ವಿ : ವಿ : ವಿ |
| ವಿನುತ ಜಾರದೊಳಿರ್ಪವ ನೀನೊ ನಾನೊ | ವಿ : ವಿ : ವಿ : ಬ್ರ |
| | (ಶಂಕರದೇವ) |

ವಿವಿಧ ಬಗೆಯ ಸಾಂಗತ್ಯದ ರೂಪಗಳನ್ನು ನಿಜಗುಣಶಿವಯೋಗಿ ಸಮ ಚತುಷ್ಪದಿ, ಸರ್ಪ ಭೂಷಣರು ಚೌಪದಿ, ಸಾಂಗತ್ಯಕ್ಕೂ ಪುರಾತನವಾದ ವರ್ಧಿತ ಸಾಂಗತ್ಯವೆಂದು ಕರೆಯಲ್ಪಡುವ ಈ ಅಂಶ ಛಂದಸ್ಸಿಗೂ ಅಲ್ಲಮ, ಅಮುಗಿದೇವಯ್ಯ, ನಿರ್ವಾಣಿ ಬೋಳೇಶ, ಗುರುಬಸವ, ನಿಜಗುಣರು, ಕಸ್ತೂರದೇವ, ಶಂಕರದೇವ, ಹಾಗಲ್ವಾಡಿ ಮುದ್ವೀರಸ್ವಾಮಿ, ಮೈಲಾರ ಬಸವಲಿಂಗಶರಣ, ಸರ್ಪಭೂಷಣ ಶಿವಯೋಗಿ ಮುಂತಾದವರು ಬಳಸಿದ್ದಾರೆ.

| | |
|---|---|
| "ಧರೆಯೊಳ ಹಿಂಸೆಯ ಕರುಣಕ್ಕೆ ಭೂಷಣ | ವಿ : ವಿ : ವಿ : ವಿ |
| ಪರತರ ತಪಕೆ ಶಾಂತಿಯೆ ಭೂಷಣ | ವಿ : ಬ್ರ : ವಿ : ವಿ |
| ದರುಶನಾ ಶ್ರಮಕ್ಕೆಲ್ಲಾ ವಿರತಿಯೆ ಭೂಷಣ | ವಿ : ವಿ : ವಿ : ವಿ |
| ವಿರತಿಗೆ ಬ್ರಹ್ಮ ವಿದ್ಯೆಯೇ ಭೂಷಣ" | ವಿ : ಬ್ರ : ವಿ : ವಿ |
| | (ಸರ್ಪಭೂಷಣ ಶಿವಯೋಗಿ) |

ಅಂತ್ಯ ಪದಪ್ರಾಸವಿರುವ ಈ ಪದ್ಯವು ಸಾಂಗತ್ಯಕ್ಕಿಂತ ಪ್ರಾಚೀನವಾದುದೆಂದು ಹೇಳಲಾಗುತ್ತದೆ. ನಿಖರವಾದ ಸಾಂಗತ್ಯ ಪ್ರಕಾರಗಳನ್ನು ಶಿವಶರಣರ ಹಾಡುಗಳಲ್ಲಿ ಅಭ್ಯಸಿಸುವುದು ಅತೀ ವಿರಳವೇ. ಸಾಂಗತ್ಯದ ವಿವಿಧ ಮಾದರಿಗಳು ದೊರೆಯುತ್ತವೆ. ಶಿವದಾಸರು ತಮ್ಮ ಹಾಡಿನ ಶೈಲಿಗೆ ಅನುಗುಣವಾಗಿ ರಚಿಸಿದರಷ್ಟೇ ಅವನ್ನು ನಾವು ವಿವಿಧ ಛಂದೋರೂಪಗಳಲ್ಲಿ ಗುರುತಿಸಬಹುದಾಗಿದೆ.

ಸಾಂಗತ್ಯದಂತೆ ಅಕ್ಕರೆಗಳ ಬಳಕೆಯೂ ಶಿವದಾಸರ ಹಾಡುಗಳಲ್ಲಿ ಕಾಣಸಿಗುತ್ತವೆ. ಅಕ್ಕರಗಳಲ್ಲಿ ಕಿರಿಯಕ್ಕರ ಹಾಗೂ ಪಿರಿಯಕ್ಕರ ಛಂದಸ್ಸಿನ ಪದ್ಯಗಳು ಅಧಿಕ ಪ್ರಮಾಣದಲ್ಲಿ ಕಂಡುಬರುತ್ತವೆ.

| | |
|---|---|
| ಆಸೆಯೆಂಬಂಕುರ ತೋರುತಿದೆ | ವಿ : ವಿ : ರು |
| ರೋಷವೆಂಬಾಕಾಯ ಹುಟ್ಟುತಿದೆ | ವಿ : ವಿ : ರು |
| ಭಾಷೆಯ ವ್ರತಗಳು ತಪ್ಪುತಿದೆ | ವಿ : ವಿ : ರು |
| ಹೇಸದೆ ಭವದೊಳು ಹುಬ್ಬುತಿದೆ | ವಿ : ವಿ : ರು |
| | (ಅಕ್ಕಮಹಾದೇವಿ) |

ಕಿರಿಯಕ್ಕರದ ಬಳಕೆಯು ಅಕ್ಕಮಹಾದೇವಿ ಹಾಡಿನಲ್ಲಿ ಮೇಲಿನ ಹಾಗೆ ಬಳಕೆಗೊಂಡಿದೆ. ಹಾಗೆಯೇ ಮದನವತಿಯ ಬಳಕೆಯು ಅಲ್ಲಲ್ಲಿ ಕಂಡುಬರುತ್ತದೆ. ಗುರುಬಸವ, ಬತ್ತಲೇಶ್ವರ, ಜಿಗುನಿ ಮರುಳಾರ್ಯ, ನಿಜಗುಣ ಶಿವಯೋಗಿ, ಕಸ್ತೂರದೇವ, ಶಂಕರದೇವ, ಬಾಲಲೀಲಾ ಶಿವಯೋಗಿ ಇವರು ಇದರ ಬಳಕೆ ಮಾಡಿದ್ದಾರೆ.

| | |
|---|---|
| ಆರು ಕಮಲಗಳು ಅಡಿಯಾದುದು ಒಂದು ಚಂದಮಾಮ | ವಿ : ವಿ : ವಿ : ರು |
| ಆರ ಮೀರಿ ಮರದೊಳಗೆ ನಿಂದುದು ಒಂದು ಚಂದಮಾಮ | ವಿ : ವಿ : ವಿ : ರು |
| ಆರೂಢ ದೈವತ್ತು ಒಂದಾದುದು ಒಂದು ಚಂದಮಾಮ | ವಿ : ವಿ : ವಿ : ರು |
| ಆರೂಢ ಧ್ವನಿ ಸುಮಮ್ಮಾನವಾದದು ಒಂದು ಚಂದಮಾಮ | ವಿ : ವಿ : ವಿ : ರು |
| | (ಶಿ.ಗೀ. ಪು.೩೦೮) |

ನಾಲ್ಕು ಸಾಲಿನ ಈ ಪದ್ಯದಲ್ಲಿ ಪ್ರತಿ ಸಾಲಿನಲ್ಲೂ ಮೂರು ವಿಷ್ಣು ಕೊನೆಗೊಂಡು ರುದ್ರಗಣವೂ ಪ್ರಾಸವೆಂಬಂತೆ ಆದಿಯಲ್ಲಿ ಬರುತ್ತದೆ. ಚಂದಮಾಮದಂತಹ ಜಾನಪದೀಯ ಹಾಡುಗಳಲ್ಲಿ ಮದನವತಿ ಅಂಶ ಛಂದಸ್ಸು ಅಧಿಕವಾಗಿ ಬಳಕೆಯಾಗುತ್ತದೆ.

| | |
|---|---|
| "ಇಹ ಪರವೆಂಬೆರಡೈರಣೆಗಳ ಹೂಡಿ | ವಿ : ವಿ : ವಿ : ಬ್ರ |
| ಶಿವೋಹ ಮೆಂಬಗ್ಘ ವಣೆಯ ತುಂಬಿ | ವಿ : ವಿ : ವಿ : ಬ್ರ |
| ನಾಹಂ ಕೋಹಂ ಸೋಹ ಮೆನ್ನದ ಮುನ್ನ | ವಿ : ವಿ : ವಿ : ಬ್ರ |
| ದಾಸೋಹ ವಿಡಿದು ನಡೆವುತ ಬಂದರೋ ೧ | ವಿ : ವಿ : ವಿ : ಬ್ರ |
| | (ನಿರ್ವಾಣಿ ಬೋಳೇಶ, ಶಿ.ಗೀ., ಪು. ೨೫೭) |

ಮದನವತಿಯಂತೆ ಛಂದೋವಸಂತವು ಇದ್ದು ರುದ್ರಗಣದ ಬದಲಾಗಿ ಬ್ರಹ್ಮಗಣವು ಕಂಡುಬರುತ್ತದೆ. ಈ ಛಂದೋವಸಂತವನ್ನು ಗುರುಬಸವ, ನಿಜಗುಣಶಿವಯೋಗಿ, ಕಸ್ತೂರದೇವ, ಮರಿಶಾಂತ ಬಸವದೇವ, ಹಾಗಲ್ವಾಡಿ, ಮುದ್ವೀರಸ್ವಾಮಿ, ಬಾಲಲೀಲಾ ಮಹಾಂತ ಶಿವಯೋಗಿ ಮುಂತಾದವರು ಬಳಸಿದ್ದಾರೆ.

ಎಸ್.ಎಸ್. ಅಂಗಡಿಯವರು ವಚನ ಸಾಹಿತ್ಯ ಛಂದಃಶಿಲ್ಪ ಎಂಬ ಲೇಖನದಲ್ಲಿ ವಚನಕಾರರ ಛಂದಸ್ಸಿನ ಲಕ್ಷಣಗಳನ್ನು ಹೀಗೆ ಗ್ರಹಿಸುತ್ತಾರೆ. ಶಿವಶರಣರಾದಿಯಾಗಿ ವಚನಗಳಂತೆ ಹಾಡುಗಳು ರಚಿತವಾಗಿವೆ. ವಚನಗಳಂತೆ ಹಾಡುಗಳು ದೇಶಿಮಟ್ಟುಗಳಾಗಿದ್ದರಿಂದ ವಚನಗಳ ಛಂದಸ್ಸಿನ ಲಕ್ಷಣಗಳು ಹಾಡುಗಳ ಲಕ್ಷಣಗಳು ಆಗಿವೆ.

"೧. ಅಧ್ಯಯನಕಾರರಿಗೆ ಪರಿಚಿತವಾಗಿರುವ ಮಾತ್ರ ಮತ್ತು ಅಂಶಗಣಗಳು ವಚನಗಳಲ್ಲಿ ಕಂಡುಬರುತ್ತವೆ. ಆದರೆ ಯಾರೂ ಉದ್ದೇಶಪೂರ್ವಕವಾಗಿ ಬಳಸಿಲ್ಲ.

೨. ವಚನಗಳಲ್ಲಿ ನಿಯಮಿತ ಲಯವಿಲ್ಲ ಲಯ ಅನಿಯಮಿತವಾಗಿರುತ್ತದೆ. ಕೆಲವು ಸಾರಿ ಹಲವು ಲಯಗಳ ಮಿಶ್ರಣ ಕಂಡುಬರುತ್ತದೆ.

೩. ವಚನಗಳು ಗೇಯಗುಣಗಳಿಂದ ಕೂಡಿದವುಗಳಾಗಿವೆ. ಅಕ್ಷರ ಆವೃತ್ತಿ, ಪದ, ಪದಪುಂಜ ಕೆಲವು ಸಾರಿ ವಾಕ್ಯಗಳ ಪುನಾರಾವರ್ತನೆಯು ಕೂಡ ವಚನಗಳಲ್ಲಿ ಕಂಡುಬರುತ್ತದೆ."[೫೪]

ಈ ಮೇಲಿನ ಲಕ್ಷಣಗಳನ್ನು ಶಿವದಾಸರ ಹಾಡುಗಳು ಸಹ ಒಳಗೊಂಡಿವೆ. ಅಲ್ಲದೆ ರಾಗ-ತಾಳಗಳನ್ನು ಒಳಗೊಂಡಿವೆ.

ಹೀಗೆ ಅಂಶಛಂದಸ್ಸಿಗೆ ಸಂಬಂಧಿಸಿದಂತೆ ವಿವಿಧ ಬಗೆಯ ರೂಪಗಳನ್ನು ಶಿವದಾಸರ ಹಾಡುಗಳ ಗಮನಿಸಬಹುದಾಗಿದೆ. ಇವುಗಳ ಜೊತೆಗೆ ಅಕ್ಕರಿಕೆ, ಉತ್ಸಾಹದಂತೆ ಅಂಶ ಛಂದಸ್ಸಿನ ಕನ್ನಡ ಮಟ್ಟಗಳನ್ನು ಶಿವದಾಸರ ಹಾಡುಗಳಲ್ಲಿ ಗುರುತಿಸಬಹುದು. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ, ಶರಣರ ಹಾಡುಗಳಲ್ಲಿ ಕೆಲವಾರು ಒಂದೇ ಬಗೆಯ ಛಂದಸ್ಸಿನ ನುಡಿಗಳನ್ನು ಒಳಗೊಳ್ಳದೆ ಇರುವುದು. ಹೀಗೆ ಮೂಡಿದುದರ ವೈಶಿಷ್ಟ್ಯವೆಂದರೆ ಪ್ರಾಯಶಃ ಹಾಡುವಾಗ ವೈವಿಧ್ಯವನ್ನು ತರುವ ಉದ್ದೇಶದಿಂದ ಹಾಗೆ ಮಾಡಿರಬೇಕು.

ಶಿವದಾಸರ ಹಾಡಿನ ಮಟ್ಟು ಶುದ್ಧ ಜಾನಪದೀಯ ಶೈಲಿಯಿಂದ ರಚಿತಗೊಂಡಿರುವಂಥದ್ದು. ಬಸವಾದಿ ಶರಣರ ಪೂರ್ವದಲ್ಲೇ ಕವಿರಾಜಮಾರ್ಗದಲ್ಲಿ ಪ್ರಸ್ತಾಪಗೊಂಡ ಚೆತ್ತಾಣ ಬೆದಂಡೆ, ಹನಕೆವಾಡು, ಕೋಲುಪದಗಳಂತಹ ದೇಶಿಯ ಸೊಗಡಿನ ಹಾಡಿನ ವಿವಿಧ ಪ್ರಕಾರಗಳನ್ನು ೧೨ನೇ ಶತಮಾನದಲ್ಲಿ ಶಿವಶರಣರು ಸಾಹಿತ್ಯಕ ರೂಪಕ್ಕೆ ತಂದರು. ದೇವವಾಣಿಯು ಜನವಾಣಿಯಾಗದ ಸಂದರ್ಭದಲ್ಲಿ ಜನವಾಣಿಯನ್ನೇ ದೇವವಾಣಿಯಾಗಿ ಮಾಡಿದ ಕೀರ್ತಿ ಶಿವಶರಣರದು. ಸಾಮಾಜಿಕ, ಧಾರ್ಮಿಕ ವಿಷಯಗಳಲ್ಲಿ ಹೊಸ ಹೊಸ ಆಯಾಮಗಳನ್ನು ಕಂಡುಕೊಂಡು, ಹೊಸ ಹೊಸ ವಿಚಾರಗಳನ್ನು ಮಂಡಿಸಿ ಅವುಗಳನ್ನು ಕಾರ್ಯರೂಪಕ್ಕೆ ತರುವ ಸನ್ನಿಹಿತದಿಂದ ಒಂದು ಸುಸಂಘಟಿತ ಆಂದೋಲವನ್ನೆ ಆರಂಭಿಸಿ ಕ್ರಾಂತಿಯನ್ನೇ ಕೈಗೊಂಡರು. ಇವರ ಮೂಲ ಉದ್ದೇಶ ಜನಸಾಮಾನ್ಯರಿಗೆ ತಮ್ಮ ಚಿಂತನೆಗಳು ತಿಳಿದು ಅವರೂ ಚಳವಳಿಯಲ್ಲಿ ಭಾಗವಹಿಸುವಂತಾಗಲಿ ಎಂಬ ಆಶಯದೊಂದಿಗೆ ಅವರ ಭಾಷೆಯಲ್ಲಿ ಹೇಳುವುದು, ಅವರ ಹಾಡಿನ ದಾಟಿಯಲ್ಲಿ ಪದ ಕಟ್ಟುವುದು. ಅವರನ್ನು ಆಕರ್ಷಿಸುವ ಹೊಸ ಹೊಸ ಮಟ್ಟುಗಳನ್ನು ರೂಪಿಸುವುದು. ಅಂದು ಅವರಿಗೆ ಅಗತ್ಯವಾಗಿತ್ತು. ಆದ್ದರಿಂದ ಅಂದಿನವರೆಗಿನ ಶಿಷ್ಟ ಶೈಲಿಯನ್ನು ತೊರೆದು ದೇಸಿ ಸೊಗಡಿನ 'ವಚನ'ಗಳನ್ನು ರಚಿಸಿದರು. ಅತ್ತ ಗದ್ಯ ಅಲ್ಲದ ಪದ್ಯವು ಅಲ್ಲದ ಶೈಲಿಯಿಂದ ಕೂಡಿದ ಈ ಸಾಹಿತ್ಯದಿಂದಲೇ ಸಾಮಾಜೋಧಾರ್ಮಿಕ ಕ್ರಾಂತಿಗೆ ಕಾರಣರಾದರು.

ಬರೀ ವಾಚನಗಬ್ಬದಿಂದ ಈ ಕಾರ್ಯ ಕಷ್ಟ ಸಾಧ್ಯ ಎಂಬುದನ್ನು ಅರಿತ ಶರಣರು, ಗೇಯ ಗುಣದ ಹಾಡುಗಳ ಮೂಲಕ ತೀವ್ರವಾದ ಪರಿಣಾಮ ಗೈಯಲು ಸಾಧ್ಯವೆಂಬುದನ್ನು ಹಿಂದಿನ ಹಾಗೂ ಸಮಕಾಲೀನ ಸಾಹಿತ್ಯ ಪ್ರಭಾವದಿಂದ ಮನಗಂಡು. ಸ್ವರ ವಚನಗಳ ರೂಪದ ಹಾಡುಗಳನ್ನು ರಚಿಸಿ. ಅವುಗಳಿಗೆ ರಾಗ, ತಾಳ, ನಿರ್ದೇಶಿಸಿದರು. ತಾಳ, ತಂಬೂರಿ ವಾದ್ಯಗಳೊಂದಿಗೆ ರಾಗಗಳನ್ನು ನಿರ್ದೇಶಿಸಿಕೊಂಡು ಹಾಡುವ ಈ ಶಿವಶರಣರಾದಿಯಾಗಿ ಬಂದ ಅನುಭಾವಿಗಳ ಮಾರ್ಗವದು.

ಸ್ವರ ಗೀತೆಗಳ ಶೈಲಿಯನ್ನು ಗಮನಿಸಿದಾಗ ಪಲ್ಲವಿ, ನುಡಿಗಳು, ಕೊನೆಯ ನುಡಿಯಲ್ಲಿ ಅಂಕಿತ, ಆದಿಯಲ್ಲಿ ರಾಗ, ತಾಳ ಸೂಚನೆ, ಬೆಡಗಿನ ಹಾಗೂ ಸರಳ ಭಾಷೆಯ ಬಳಕೆ, ಆದಿಪ್ರಾಸ, ದೇಶಿ ಛಂದೋಬಂಧ, ವೀರಶೈವ ತತ್ವ, ಲೋಕನೀತಿಪರವಾದ ವಸ್ತು. ಸಂಗೀತ ಸಾಹಿತ್ಯದ ಸಾಮರಸ್ಯವನ್ನು ಹಾಡುಗಳು ಒಳಗೊಂಡವು.

ಹಾಡುಗಳನ್ನು ಹಾಡುವ ರಾಗಗಳ ಶೈಲಿಯು ಹಾಡಿಂದ ಹಾಡಿಗೆ ಭಿನ್ನವಾಗಿದೆಯೆನ್ನಬಹುದು. ಧನ್ಯಾಸಿ, ಶಾಂತ ಮಲಹರಿ, ಮಾಧುಮಾಧವಿ, ಮಲಹಂ, ದೇಶಿ, ಭೈರವಿ, ಭೂಪಾಳಿ, ವರಾಳಿ, ಗುಜ್ಜರಿ ನಾಟಿ, ಲಲಿತೆ, ದೇಶಾಕ್ಷಿ, ನಾದನಾಮಶ್ರೀ, ಧವಳಾರ ಶೋಕವರಾಳಿ, ರೇವಗುಪ್ತಿ, ಆರಭಶ್ರೀ, ಕನ್ನಡಗೌಳಿ, ಸೌರಾಷ್ಟ್ರ, ಸಿಂಧುರಾಮಶ್ರಿ, ಶಂಕರಾಭರಣ, ಅಪಹರಿಪತ್ತು, ಶುದ್ಧ ಕಾಂಬೋಜಿ, ತೆಲುಗು ಕಾಂಬೋಜಿ, ಒಡ್ಡಿಯ ಕಾಂಬೋಜಿ, ಪತ್ತುವರಾಳಿ, ಆಹರಿ, ಸಾರಂಗ, ಪಾಡಿ ಈ ರಾಗಗಳಿಗೆ ತಾಳಗಳಾಗಿ ರೂಪಕ, ಝುಂಪೆ, ಅಟ್ಟ ತಾಳ ಹಾಗೂ ರಚ್ಚೆ ತಾಳ, ರೂಪಕ, ಝುಂಪೆ, ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿನ ಸಪ್ತತಾಳಗಳು ನಿರ್ದೇಶಿಸಲ್ಪಟ್ಟಿವೆ. ಈ ರಾಗಗಳನ್ನು ಶೈಲಿಯ ಹಿನ್ನೆಲೆಯಲ್ಲಿ ಹಾಡಬೇಕು. ಅಂಶಗಣ ಘಟಿತ ಛಂದೋಬಂಧಗಳಲ್ಲಿ ಕೇವಲ ರಾಗಸೂಚನೆ ಮಾತ್ರ ಇದ್ದು, ಮಾತ್ರಗಣ ಘಟಿತ ಛಂದೋಬಂಧಗಳಲ್ಲಿ ರಾಗ, ತಾಳ ಎರಡೂ ಕಡ್ಡಾಯವಾಗಿ ಕಂಡುಬರುತ್ತವೆ.

ಜನ ಹಾಡಲೆಂದೇ ಹಾಡುಗಳನ್ನು ರಚಿಸಿದರು. ಆದ್ದರಿಂದ ಅವರು ಹಾಡುಗಳ ಮಾಧ್ಯಮವಾಗಿ ಬಳಸಿದ ಭಾಷೆ ನಡುಗನ್ನಡದ ಜಾನಪದೀಯ ಭಾಷೆ. ಇದನ್ನೇ ಮಾಧ್ಯಮವಾಗಿ ಮಾಡಿಕೊಂಡು ವೀರಶೈವ ತತ್ವ ಸಿದ್ಧಾಂತಗಳಾದ ಷಟ್‌ಸ್ಥಲ, ಪಂಚಾಚಾರ, ಅಷ್ಟಾವರಣಗಳೊಂದಿಗೆ ಸಮಾಜವಿಮರ್ಶೆಯಂತಹ ವಸ್ತುಗಳನ್ನು ಹಾಡಿದರು. ೧೨ನೇ ಶತಮಾನದ ಶರಣರಲ್ಲಿ ಮುಖ್ಯವಾಗಿ ತತ್ವಪ್ರತಿಪಾದನೆ ಕಂಡುಬಂದರೆ, ಮುಂದಿನ ಅನುಭಾವಿಗಳಲ್ಲಿ ಹೆಚ್ಚಾಗಿ ಲೋಕನೀತಿಯು ಕಂಡುಬರುತ್ತದೆ. ವೀರಶೈವ ತತ್ವದಂತಹ ವಸ್ತುವನ್ನು ಅಭಿವ್ಯಕ್ತಿಸುವ ಶೈಲಿಯು ಸ್ವಲ್ಪ ಶಿಷ್ಟತೆಯಿಂದ ಕೂಡಿದ್ದು, ಲೋಕನೀತಿಯಂತಹ ವಸ್ತುವನ್ನು ಅಭಿವ್ಯಕ್ತಿಸುವ ಶೈಲಿಯು ಜಾನಪದೀಯವಾಗಿರುವುದು ಕಂಡುಬರುತ್ತದೆ. ಅದನ್ನು

"ಪರಮಾನಂದದ ಲೀಲೆಯಲಿ
ಪರಮಗುರು ಪದವರಿದನು
ಪರಮಸುಖದೊಳ ಗೋಲಾಡುವ
ಪರಂಜ್ಯೋತಿ ಪರಾಪರನು || ಪ ||          (ಶಿ.ಗೀ. ಪು. ೧೭೫)

ಬಸವಣ್ಣನ ಈ ಹಾಡಿನಲ್ಲಿ ಷಟ್‌ಸ್ಥಲದಲ್ಲಿ ಒಂದಾದ ಶರಣಸ್ಥಲವನ್ನು ಕುರಿತು ವಿವೇಚಿಸುವುದರಿಂದ ಭಾಷೆಯು ಗಂಭೀರವಾಗಿ ಕಂಡುಬರುತ್ತದೆ.

ಲೋಕನೀತಿಯುಂತಹ ವಸ್ತುವನ್ನು ಹೇಳುವಲ್ಲಿ ಭಾಷಾಶೈಲಿಯು ತೀರ ಸರಳ ಗ್ರಹಿಕೆಯ ದೃಷ್ಟಿಯಿಂದ ಸುಲಭವಾಗಿರುವುದು.

“ನಾನಾ ಜನ್ಮವು ತಿರುತಿರುಗಿ
ಹೀನ ಮನೆ ಸಂಸಾರವಾಗಿ
ಶ್ವಾನ ಸೂಕರನಂತೆ ಮನೆ ಮನೆ
ಖೂನವಿಲ್ಲದೆ ವ್ಯರ್ಥ ತಿರುಗಿದೆ”

ಕಡಕೋಳ ಮಡಿವಾಳೇಶ್ವರ ಈ ಹಾಡಿನ ನುಡಿಯು ಲೋಕನೀತಿಯನ್ನು ಪ್ರತಿನಿಧಿಸುತ್ತಿದ್ದು ಭಾಷೆ ಮತ್ತು ಹೇಳುವ ಶೈಲಿಯು ಸರಳವಾಗಿದೆ.

ಒಟ್ಟಾರೆಯಾಗಿ ಶಿವದಾಸರ ಹಾಡುಗಳ ಬಗೆಗೆ ಹೇಳುವುದಾದರೆ, ಇವರ ರಚನೆಗಳಲ್ಲಿ ಪ್ರತ್ಯೇಕ ಗಣಗಳ ಸಹಾಯವನ್ನು ಅಧಿಕವಾಗಿ ಬಳಸಿರುವುದು ಕಂಡುಬರುತ್ತದೆ. ಅಧಿಕವಾದ ಚೌಪದಿಗಳ ರಚನೆಯೂ ಕಾಣಸಿಗುತ್ತದೆ. ಅದರಲ್ಲಿಯೂ ಮಾತ್ರಲಯದ ಚೌಪದಿಗಳಿಗೆ ಅಗ್ರಸ್ಥಾನ ಕಂಡುಬರುತ್ತದೆ. ಅಂಶಬಂಧಗಳಾದ ಕಿರಿಯಕ್ಕರ ಮತ್ತು ಮದನವತಿಗಳು ಅಲ್ಲಲ್ಲಿ ಸ್ಥಾನ ಪಡೆದುಕೊಂಡಿವೆ. ಬಳಕೆಮಾಡಿರುವ ಛಂದಸ್ಸಿನ ದೃಷ್ಟಿಯಿಂದ ಅಂಶ ಛಂದಸ್ಸಿಗೆ ಮೊದಲ ಸ್ಥಾನವೆನ್ನಬಹುದು. ಛಂದಸ್ಸಿನ ದೃಷ್ಟಿಯಿಂದ ಅಸ್ಪಷ್ಟತೆಯು ಕಂಡುಬಂದರೂ ಪ್ರಾಸದೃಷ್ಟಿಯಿಂದ ನಿಖರತೆ, ಸ್ಪಷ್ಟತೆಯೂ ಶಿವದಾಸರ ಹಾಡುಗಳಲ್ಲಿ ಕಂಡುಬರುತ್ತದೆ.

ಶಿವದಾಸ ಗೀತಾಂಜಲಿಯಲ್ಲಿ ೨೪೦ಕ್ಕೂ ಅಧಿಕವಾದ ಹಾಡುಗಳಿದ್ದು, ಅವುಗಳಲ್ಲಿ ಮುಕ್ಕಾಲು ಭಾಗಕ್ಕಿಂತಲೂ ಹೆಚ್ಚು ಎದರೆ ೧೮೨ ಹಾಡುಗಳಲ್ಲಿ ನಾಲ್ಕು ಸಾಲಿನ ನುಡಿಗಳಿವೆ, ಉಳಿದಂತೆ ಮೂರು ಸಾಲಿನ ನುಡಿಗಳು, ಎರಡು, ಅಷ್ಟಪದಿ, ಏಳು ಸಾಲಿನ ನುಡಿಗಳು ಅಲ್ಲಲ್ಲಿ ಕಂಡುಬರುತ್ತವೆ.

ಶಿವದಾಸರು ಸಾಹಿತ್ಯವು ಜನರಿಗೆ ಮುಟ್ಟಬೇಕೆಂಬ ಕಾರಣಕ್ಕಾಗಿ ರಾಗ, ತಾಳ, ಲಯಗಳಿಗೆ ಒಳಪಟ್ಟು ಸುಂದರವಾಗಿ ಹಾಡಲು ಅನುವರಿತು ಹಾಡುಗಳನ್ನು ಕಟ್ಟಿದರು. ಛಂದಸ್ಸಿನ ನಿಯಮಕ್ಕೆ ಒಳಪಟ್ಟು ಕಟ್ಟಬೇಕೆಂಬ ನಿಯಮವು ಅವರಲ್ಲಿ ಇರಲಿಲ್ಲ. ಒಂದರ್ಥದಲ್ಲಿ ಹೇಳುವುದಾದರೆ, ಛಂದಸ್ಸು ಹಾಡುಗಳನ್ನು ಹುಡುಕಿಕೊಂಡು ಹೋಯಿತೆನ್ನಬಹುದು. ಭಾಷೆಯ ದೃಷ್ಟಿಯಿಂದ ಜಾನಪದ ಶೈಲಿಯ ಆಡುಮಾತಿನ ಹಾಡುಗಳು ಕಂಡುಬರುತ್ತವೆ. ಕೆಲ ಹಾಡುಗಳಲ್ಲಿ ಶಿಷ್ಟತೆಯು ಕಂಡುಬಂದರೂ ಹೆಚ್ಚಾಗಿ ಆಡುಮಾತಿನ ಸರಳವಾದ ಹಾಡುಗಳೇ ಅಧಿಕವಾಗಿವೆ.

ಶಿವದಾಸರ ಹಾಡುಗಳು ಹಾಡುಗಬ್ಬವಾದ್ದರಿಂದ ಅವುಗಳನ್ನು ಹಾಡಿದಾಗ ಮಾತ್ರ ಅದರ ನಿಜವಾದ ಲಯ ಕಂಡುಕೊಳ್ಳಬಹುದು. ಇವುಗಳನ್ನು ತಾಳಕ್ಕೆ ತಕ್ಕಂತೆ ಹಿಗ್ಗಿಸಲುಬಹುದು, ಕುಗ್ಗಿಸಲು ಬಹುದು. ಇಂದಿಗೂ ಇವು ಜನರ ಬಾಯಲ್ಲಿ ನಲಿದಾಡುತ್ತಿವೆ. ಛಂದಸ್ಸಿನ ದೃಷ್ಟಿಯಿಂದ ಈ ಹಾಡುಗಳನ್ನು ಲಕ್ಷಿಸುವುದಕ್ಕಿಂತ ಅವುಗಳ ಭಾವ, ರಾಗಕ್ಕೆ ತಕ್ಕಂತೆ ಅಭ್ಯಸಿಸುವುದು ಹೆಚ್ಚು ಸೂಕ್ತವಾದುದು.

## ಕೊನೆ ಟಿಪ್ಪಣಿಗಳು

೧. ಬಸವನಾಳರು ಶಿ.ಶಿ., (ಸಂ.) ಬಸವಣ್ಣನವರ ಷಟ್‌ಸ್ಥಲದ ವಚನೆಗಳು, ಪ್ರಸ್ತಾವನೆ, ಪ್ರ.೧೧

೨. ಬಸವರಾಜು ಎಲ್., ಪಂಪಭಾರತ (ಸಂ.)

೩. ಬಸವರಾಜು ಎಲ್., ಸರಳ ಪಂಪಭಾರತ (ಸಂ.)

೪. ಹಿರೇಮಠ ಆರ್.ಸಿ., ಚೆನ್ನಬಸವಣ್ಣನವರ ವಚನಗಳು, (ಸಂ.) ವ.ಸ., ೧೧೧೨

೫. ಲಠ್ಠೆ ಎಂ.ಎಸ್., ಸ್ವರವಚನಗಳು ಒಂದು ವಿವೇಚನೆ, ಪು.೧೦೪

೬. ಬಸವನಾಳ ಎಸ್.ಎಸ್., ಕೈವಲ್ಯ ದರ್ಪಣ, ಪು.೫೬

೭. ಅದೇ, ಪು.೫೫

೮. ಜ.ಚ.ನಿ. ಲೇ. ಕೈವಲ್ಯ ಪದ್ಧತಿ ಪ್ರದೀಪಿಕೆ, ಪು.೭೪೫

೯. ನಾರಾಯಣಪ್ರಸಾದ್ ಕೆ.ಜಿ., ಸ್ವರವಚನಗಳ ಛಂದೋರೂಪಗಳು (ಭೂಷಣ), ಪು.೩೪೭

೧೦. ಪ: ಪಂಚ ಮಾತ್ರಾಗಣವೆಂದಾರ್ಥ

೧೧. ನಾರಾಯಣ ಪ್ರಸಾದ್ ಕೆ.ಜಿ., ಸ್ವರವಚನಗಳ ಛಂದೋರೂಪಗಳು (ಭೂಷಣ) ಪು.೩೫೭

೧೨. ಕಲಬುರ್ಗಿ ಎಂ.ಎಂ., ಸ್ವರವಚನ ವಿಚಾರಸಂಕಿರಣ, ಮಲ್ಲಾಪುರ. ಬಿ.ವ್ಹಿ, (ಲೇ.). ಸ್ವರ ವಚನಗಳ ಛಂದೋಸ್ವರೂಪ, ಪು.೧೦೩

೧೩. ನಾರಾಯಣ ಪ್ರಸಾದ್, ಸ್ವರವಚನಗಳ ಛಂದೋರೂಪಗಳು (ಭೂಷಣ) ಪು.೩೬೫

೧೪. ಅಂಗಡಿ ಎಸ್.ಎಸ್., ವಚನ ಸಾಹಿತ್ಯ ಭಾಷೆ, ಪು.೯೮

# ಅಧ್ಯಾಯ ೬

## ಶಿವದಾಸರ ಹಾಡುಗಳು : ಸಂಪಾದನೆ

"ಗ್ರಂಥ ಸಂಪಾದನೆ" ಎನ್ನುವುದನ್ನು ಸ್ಥೂಲವಾಗಿ ಹೇಳುವುದಾದರೆ, ಕವಿ ಪಠ್ಯವನ್ನುಳ್ಳ ಕೆಲವು ಲಿಪಿಕಾರರಿಂದ ಲಿಖಿಸಲ್ಪಟ್ಟ ಅಥವಾ ಹಲವು ಹಸ್ತಪ್ರತಿಗಳನ್ನು ಮುಂದಿರಿಸಿಕೊಂಡು ಕವಿಯ ಮೂಲಪಾಠಕ್ಕೆ ಹತ್ತಿರವಾದಂತೆ ಪಠ್ಯವನ್ನು ಪರಿಷ್ಕರಿಸಿ ಕೊಡುವ ಈ ಪ್ರಕ್ರಿಯೆಯನ್ನು ಗ್ರಂಥ ಸಂಪಾದನೆ ಎಂದು ಕರೆಯಲಾಗಿದೆ.

ಕಿಟೆಲ್, ಬಿ.ಎಲ್. ರೈಸ್, ಗ್ಯಾರೆಟ್, ಹೆರ್ಮನ್ ಮೋಗ್ಲಿಂಗ್‌ರಂತಹ ಅನೇಕ ಪಾಶ್ಚಾತ್ಯ ವಿದ್ವಾಂಸರು ಹಸ್ತಪ್ರತಿಗಳಲ್ಲಿ ಉಳಿದುಹೋಗಿದ್ದ ಅಮೂಲ್ಯ ಹೋಗಿದ್ದ ಅಮೂಲ್ಯ ಸಾಹಿತ್ಯವನ್ನು ಸಂಪಾದಿಸಿದರು. ಅವರ ಪರಿಶ್ರಮದಿಂದ ಕನ್ನಡದ ಅಮೂಲ್ಯ ಕೃತಿಗಳಾದ ವಡ್ಡಾರಾಧನೆ ಪಂಪಭಾರತ, ಶಬ್ದಮಣಿದರ್ಪಣ, ಪಂಪರಾಮಾಯಣದಂತಹ ಅನೇಕ ಕೃತಿಗಳು ಸಹೃದಯರಿಗೆ ಲಭಿಸಿದವು. ಇವರ ಮಾರ್ಗದಲ್ಲೆ ನಂತರದಲ್ಲಿ ಬಂದ ದೇಸಿ ವಿದ್ವಾಂಸರು ಮಿಷನರಿಗಳ ಸಂಪಾದನ ವಿಧಾನವನ್ನು ಮನಗಂಡಿದ್ದರು. ದೇಸಿ ಹಿನ್ನೆಲೆಯಲ್ಲಿ ಕೃತಿಯೊಂದನ್ನು ಶಾಸ್ತ್ರೋಕ್ತವಾಗಿ ಹೇಗೆ ಸಂಪಾದಿಸಬೇಕೆಂಬುದು ತಿಳಿಸಿಕೊಟ್ಟರು. ಡಿ.ಎಲ್. ನರಸಿಂಹಾಚಾರ್, ಫ.ಗು. ಹಳಕಟ್ಟಿ, ಆರ್. ನರಸಿಂಹಾಚಾರ್, ವಿ. ಶಾಮಾಚಾರ್ಯ, ಎಸ್.ಜಿ. ನರಸಿಂಹಚಾರ್ ಮುಂತಾದ ದೇಸಿ ವಿದ್ವಾಂಸರು ಗ್ರಂಥ ಸಂಪಾದನೆ ಕ್ಷೇತ್ರವನ್ನು ಶ್ರೀಮಂತಗೊಳಿಸಿದರು. ಅದುವರೆಗೂ ಕ್ಲಿಷ್ಟಕರವಾದ ರೀತಿಯಲ್ಲಿ ಸಂಪಾದಿತವಾಗುತ್ತಿದ್ದ ಸಾಹಿತ್ಯ ಕೃತಿಗಳು ಓದುಗರಿಗೆ ಓದುವ ದೃಷ್ಟಿಯಿಂದ ಹಿಡಿದು ಅರ್ಥೈಸುವಿಕೆಯೂ ಕಷ್ಟಕರವೇ ಆಗಿತ್ತು. ಇದನ್ನು ಮನಗಂಡಿದ್ದ ದೇಶಿ ವಿದ್ವಾಂಸರು ದೀರ್ಘ ಪರಿಶ್ರದ ಮೂಲಕ ಕೃತಿ ಆರಂಭದಲ್ಲಿ ಪ್ರಸ್ತಾವನೆ. ಪಾಠಾಂತರಗಳನ್ನು ಗುರುತಿಸುವಿಕೆ, ಪಾಠ ಪರಿಷ್ಕರಣ, ಕವಿಯ ಕಾಲದ ಬಗೆಗೆ ಸೂಕ್ತ ಮಾಹಿತಿ, ಕೊನೆಗೆ ಅನುಬಂಧದಲ್ಲಿ ಕಠಿಣ ಪದಗಳ ಪದಕೋಶಗಳನ್ನೊಳಗೊಂಡ ಅತ್ಯಮೂಲ್ಯ ಸಂಪಾದಿತ ಕೃತಿಗಳು ಇವರ ಕಾಲಘಟ್ಟದಲ್ಲಿ ಕಂಡುಬಂದವು. ಇವರಾಕಿದ ಭದ್ರಬುನಾದಿಯ ಮೇಲೆ ಇವರ ನಂತರದಲ್ಲಿ ಬಂದ ಕುವೆಂಪು, ಎಲ್. ಬಸವರಾಜು, ಅನಂತನಾರಾಯಣರಾವ್ ಮುಂತಾದವರ ಸಂಪಾದನೆಗಳು ಅದರದೇ ವೈಶಿಷ್ಟ್ಯತೆ ಕಂಡುಬರುತ್ತದೆ.

ಈ ಹಿನ್ನೆಲೆಯಲ್ಲಿ ಹಳಗನ್ನಡ ಹಾಗೂ ಮಧ್ಯಕಾಲೀನ ಕನ್ನಡ ಸಾಹಿತ್ಯದ ಪಠ್ಯಗಳನ್ನು ನಮ್ಮ ಹಿರಿಯ ವಿದ್ವಾಂಸರು ಎರಡು ಮುಖ್ಯ ನೆಲೆಗಳಲ್ಲಿ ಗ್ರಂಥಸಂಪಾದನೆಯ ಕಾರ್ಯವನ್ನು ಪೂರೈಸಿಕೊಂಡು ಬಂದಿದ್ದಾರೆ. ೧. ಮಾರ್ಗ ಸಾಹಿತ್ಯ ಸಂಪಾದನೆ, ೨. ದೇಸಿ ಸಾಹಿತ್ಯ ಸಂಪಾದನೆ. ಮೊದಲನೆಯ ನೆಲೆಯ ಸಂಪಾದನೆಯ ಪರಿಧಿಯಲ್ಲಿ ಹಳಗನ್ನಡದ ಚಂಪೂ ಕಾವ್ಯಗಳು ಒಳಗೊಳ್ಳುತ್ತವೆ. ಎರಡನೆ ನೆಲೆಯ ಸಂಪಾದನೆಯ ಪರಿಧಿಯಲ್ಲಿ ಮಧ್ಯಕಾಲೀನ ಕನ್ನಡ ಪಠ್ಯಗಳು ಒಳಗೊಳ್ಳುತ್ತವೆ.

ಈ ಮೇಲಿನ ಎರಡು ಸಂಪಾದನೆಯ ವೈಧಾನಿಕತೆಗಳನ್ನು ಒಟ್ಟಾರೆಯಾಗಿ ಹೀಗೆ ಗ್ರಹಿಸಬಹುದು. ಮಾರ್ಗ ಸಾಹಿತ್ಯದ ಪಠ್ಯಗಳ ಹಸ್ತಪ್ರತಿಗಳು ಕಡಿಮೆ ಪ್ರಮಾಣದಲ್ಲಿ ಲಭಿಸುವುದರಿಂದ ಕೃತಿ ಸಂಪಾದನೆಗೆ ಬಳಸಿಕೊಳ್ಳಲಾದ ಎಲ್ಲ ಹಸ್ತಪ್ರತಿಗಳ ವಿವರಗಳು ಲಭ್ಯವಾಗುತ್ತವೆ. ಆದರೆ ದೇಸಿ ಸಾಹಿತ್ಯಕ್ಕೆ ಸಂಬಂಧಿಸಿದ ಹಸ್ತಪ್ರತಿಗಳು ಹೇರಳವಾಗಿ ಸಿಗುವುದರಿಂದ ಯಾವ ಹಸ್ತಪ್ರತಿಯನ್ನು ಪ್ರಧಾನವಾಗಿರಿಸಿಕೊಳ್ಳಬೇಕೆಂಬ ಸಮಸ್ಯೆ ಬಹುವಾಗಿ ಕಾಡುತ್ತದೆ. ಇಂತಹ ಸಂದರ್ಭದಗಲ್ಲಿ ವಚನ, ಸ್ವರವಚನ, ಸಾಂಗತ್ಯ ಮೊದಲಾದ ದೇಸಿ ಪ್ರಕಾರಗಳ ಕೃತಿಗಳನ್ನು ಸಂಪಾದಿಸಿದ ನಮ್ಮ ಹಿರಿಯ ಹಾಗೂ ಸಮಕಾಲೀನ ಸಂದರ್ಭದ ವಿದ್ವಾಂಸರು, ಸಂಪಾದನೆಯ ವೈಧಾನಿಕತೆಯಲ್ಲಿ ತಮ್ಮದೇ ಆದ ಸಮಾಧಾನವನ್ನು ಕಂಡುಕೊಳ್ಳುತ್ತಾ ಬಂದಿದ್ದಾರೆ.

ಉದಾ. ಡಾ. ಎಂ.ಎಂ. ಕಲಬುರ್ಗಿಯವರು ತಮ್ಮ ಹೊಸ ಕುಮಾರರಾಮನ ಸಾಂಗತ್ಯದ ಪ್ರಸ್ತಾವನೆಯಲ್ಲಿ ದೇಸಿ ಸಾಹಿತ್ಯ ಸಂಪಾದನೆಯ ವೈಧಾನಿಕತೆಯನ್ನು ಕುರಿತು ಹೀಗೆ ಹೇಳಿದ್ದಾರೆ.

"ದೇಸಿ ಸಾಹಿತ್ಯ ಸಂಪಾದನೆಯನ್ನು ಕುರಿತು ಒಂದು ಮಾತು: ಮಾರ್ಗ ಕಾವ್ಯ ಸಂಪಾದನೆಗೆ ಹೆಚ್ಚು ಪ್ರತಿ ಬಳಸಿದಷ್ಟು ಪಾಠ ಹೆಚ್ಚು ಶುದ್ಧವಾಗುತ್ತದೆ. ದೇಸಿ ಕಾವ್ಯ ಸಂಪಾದನೆಗೆ ಹೆಚ್ಚು ಪ್ರತಿ ಬಳಸಿದಷ್ಟು ಪಾಠ ಅಶುದ್ಧವಾಗುತ್ತದೆ. ಆದ್ದರಿಂದ ಇನ್ನು ಮೇಲೆ ಈ ದಾರಿಯನ್ನು ಬಿಟ್ಟು ಕಾಲ, ದೃಷ್ಟಿಯಿಂದ ಪ್ರಾಚೀನ, ಭಾಷಾದೃಷ್ಟಿಯಿಂದ ಶುದ್ಧ, ಪ್ರತಿದೃಷ್ಟಿಯಿಂದ ಪೂರ್ಣ ಕಥೆಯ ದೃಷ್ಟಿಯಿಂದ ಸಮಗ್ರವಾಗಿರುವ ಒಂದು ಪ್ರತಿಯನ್ನು ಮಾತ್ರ ಆಯ್ದುಕೊಂಡು, ಸಾಧ್ಯವಿದ್ದಲ್ಲಿ ಲಿಪಿಕಾರರ ದೋಷವನ್ನು ನಿವಾರಿಸಿ, ಅವಶ್ಯವಿದ್ದಲ್ಲಿ ಬೇರೆ ಒಂದೋ ಎರಡೋ ಹಸ್ತಪ್ರತಿಗಳಿಂದ ಶುದ್ಧಪಾಠವನ್ನು ಸ್ವೀಕರಿಸಬಹುದು. ತೀರಾ ಅನಿವಾರ್ಯ ಪ್ರಸಂಗದಲ್ಲಿ ಊಹೆ ಮಾಡಬಹುದು. ಇದು ದೇಸಿ ಕಾವ್ಯಗಳ ಸಂಪಾದನೆಯ ಸರಿಯಾದ ಕ್ರಮ."[೧]

ಈ ಹೇಳಿಕೆಯ ಸೂಕ್ಷ್ಮವನ್ನು ಸ್ವಲ್ಪ ಅವಲೋಕಿಸಿದಾಗ ಸಂಪಾದಿತ ಪಠ್ಯದಿಂದ ಹಲವು ಅಥವಾ ಕೆಲವು ಹಸ್ತಪ್ರತಿಗಳು ಹೊರಗುಳಿಯುತ್ತವೆ. ಹಾಗೆ ಹೊರಗುಳಿದ ಹಸ್ತಪ್ರತಿಗಳ ಅಧ್ಯಯನಕ್ಕೆ ದಾರಿ ಯಾವುದು ಎಂಬಂತಹ ಸಂದಿಗ್ಧತೆಗಳು ಕಾಣಿಸಿಕೊಳ್ಳುತ್ತವೆ.

ಆದರೆ ಎಲ್. ಬಸವರಾಜು ಅವರು ಸಂಪಾದಿಸಿದ ಶಿವದಾಸ ಗೀತಾಂಜಲಿಯ ಸಂಪಾದನೆಯ ವೈಧಾನಿಕತೆಯೇ ತುಂಬ ವಿಶಿಷ್ಟವಾದುದಾಗಿದೆ.

ಇವರಿಂದ ಸಂಪಾದಿತವಾದ, ಆದಿಪುರಾಣ, ಪಂಪಭಾರತ, ಅಲ್ಲಮನ ವಚನ ಚಂದ್ರಿಕೆ, ಶಿವದಾಸ ದಾಸಗೀತಾಂಜಲಿ, ಬಸವಣ್ಣನವರ ವಚನಗಳು, ಶಬ್ದಮಣಿದರ್ಪಣದಂತಹ ಅನೇಕ ಕೃತಿಗಳು ಸಂಪಾದನೆಯ ದೃಷ್ಟಿಯಿಂದ ವೈಶಿಷ್ಟ್ಯಪೂರ್ಣವಾಗಿ ಕಂಡುಬರುತ್ತವೆ. ಪ್ರತಿಕೃತಿಯ ಆರಂಭದಲ್ಲಿ ನೀಡುವ ದೀರ್ಘ ಪ್ರಸ್ತಾವನೆ, ಕೃತಿ ಸಂಪಾದನೆಗೆ ತೆಗೆದುಕೊಂಡು ಆಕರಗಳ ಮಾಹಿತಿ, ಪ್ರತಿಪಾಠದ ಕೆಳಗೆ ಸೂಕ್ತವಾದ ಅಡಿಟಿಪ್ಪಣಿ, ಪಾಠಪರಿಷ್ಕರಣೆ, ಪಾಠಾಂತರಗಳು, ಅನುಬಂಧದಲ್ಲಿ ಅಕಾರಾದಿಯಾಗಿ ಪದಗಳ ಅರ್ಥ, ಕಾವ್ಯ ಅಥವಾ ಹಾಡುಗಳಾಗಿದ್ದರೆ, ಸುಲಭ ಪ್ರವೇಶಕ್ಕೆ ಅನುವಾಗುವಂತೆ ಅಕಾರಾದಿಯಾಗಿ ಪದ್ಯಗಳು ಮತ್ತು ಪದ್ಯದ ಮುಂದೆ ಪದ್ಯದ ಸಂಖ್ಯೆ ಹೀಗೆ ವಿವಿಧ ವಿಧಾನಗಳಿಂದ ಕೂಡಿದ. ಇವರ ಸಂಪಾದನೆಯೂ ಪಂಡಿತ ಪ್ರಧಾನವಾದ ಸಂಪಾದನೆಯಾಗಿ ಕಂಡುಬರುತ್ತದೆ.

ಗ್ರಂಥ ಸಂಪಾದನಾ ವಿಧಾನಗಳ ದೃಷ್ಟಿಯಿಂದ ಇವರ ಗ್ರಂಥಗಳು ಚಿರಸ್ಮರಣೀಯವಾಗಿಉಳಿದಿವೆ. ಮಧ್ಯಕಾಲೀನ ಸಾಹಿತ್ಯದ ಬಗೆಗೆ ಇವರ ಸಂಪಾದನೆಯೂ ಅಪೂರ್ವ ಎನ್ನಬಹುದು. 'ಶಿವದಾಸ ಗೀತಾಂಜಲಿ', 'ಅಲ್ಲಮನ ವಚನ ಚಂದ್ರಿಕೆ', 'ಶೂನ್ಯ ಸಂಪಾದನೆ'ಗಳಲ್ಲಿ ಇವರು ತೋರಿರುವ ಶ್ರದ್ಧೆ, ಪರಿಶ್ರಮ, ಪಾಂಡಿತ್ಯ ಅಗಾಧವಾದುದು. ಇತರ ಅನೇಕ ವಿದ್ವಾಂಸರು ವಿವಿಧ ದೇಸಿ ಕೃತಿಗಳ ಸಂಪಾದನೆಯನ್ನು ಮಾಡಿದ್ದಾರೆಯಾದರೂ ಎಲ್. ಬಸವರಾಜು ಅವರ ಸಂಪಾದನೆ ಅವರುಗಳ ಸಂಪಾದನೆಗಿಂತ ವೈಶಿಷ್ಟ್ಯವಾಗಿ ಕಂಡುಬರುತ್ತವೆ. ಅದನ್ನು 'ಶಿವದಾಸ ಗೀತಾಂಜಲಿ' ಮತ್ತು 'ಅಲ್ಲಮ ವಚನ ಚಂದ್ರಿಕೆ'ಯಂತಹ ಕೃತಿಗಳನ್ನು ಅಧ್ಯಯನ ಮಾಡುವುದರ ಮೂಲಕ ಅರ್ಥೈಸಬಹುದಾಗಿದೆ.

ಶ್ರೀಯುತ ಎಲ್. ಬಸವರಾಜು ಅವರ ಸಂಪಾದಿತ ಕೃತಿಗಳು ಅವಿಸ್ಮರಣೀಯವಾದವುಗಳು. ಹಳಗನ್ನಡ ಕಾವ್ಯಗಳಿಂದ ಹಿಡಿದು ಮಧ್ಯಕಾಲೀನ ಸಾಹಿತ್ಯವರೆಗಿನ ಇವರ ಸಂಪಾದನೆಗಳು ಗ್ರಂಥ ಸಂಪಾದನ ಇತಿಹಾಸದಲ್ಲಿ ಉತ್ತಮ ಕೊಡುಗೆಗಳಾಗಿವೆ. ಶ್ರೀಯುತರು ಅಪಾರ ವಿದ್ವತ್ತಿನ ಪ್ರತಿಭೆ, ಯಾವುದನ್ನೇಯಾಗಲಿ ಸುಲಭವಾಗಿ ಒಪ್ಪುವಂತವರಲ್ಲಿ ಅವರು ಪ್ರಮುಖ ಕೃತಿಗಳ ಸಂಪಾದನ ವಿಧಾನವನ್ನು ಗಮನಿಸಿದಾಗ ಪ್ರಮುಖವಾಗಿ ಕಂಡುಬರುವ ಅಂಶಗಳು ಹೀಗಿವೆ.

- ಒಂದು ಕೃತಿಯ ಬಗೆಗೆ ದೊರೆಯುವ ವಿವಿಧ ಆಕರಸಾಮಗ್ರಿಗಳನ್ನು ಪರಿಶೀಲಿಸುವುದು.
- ಪ್ರತಿ ಓಲೆ ಗರಿಗಳಲ್ಲಿ ಪಾಠಾಂತರಗಳನ್ನು ಕಂಡುಕೊಂಡು ಅದರಲ್ಲೊಂದು ಶುದ್ಧಪಾಠವನ್ನು ನಿರ್ಣಯಿಸುವುದು.
- ಕೃತಿ ಆರಂಭದಲ್ಲಿ ಅಧ್ಯಯನಕ್ಕೆ ಪೂರಕವಾಗಿ ದೀರ್ಘವಾದ ಪ್ರಸ್ತಾವನೆ ನೀಡುವುದು.
- ಕೃತಿ ಸಂಪಾದನೆಗೆ ತೆಗೆದುಕೊಂಡ ಓಲೆಗರಿಗಳು, ಕಾಗದ ಪ್ರತಿಗಳ ಬಗೆಗೆ ಮಾಹಿತಿ ಕೊಡುವುದು ಅದರಲ್ಲಿ ಓಲೆಗರಿಯ ಕಾಲ, ಲಿಪಿಕಾರನ ಹೆಸರು, ಓಲೆಗರಿಯನ್ನು ಎಲ್ಲಿಂದ ಪಡೆದಿರುವುದರ ಬಗೆಗೆ ಮಾಹಿತಿ.
- ಪ್ರಸ್ತಾವನೆಯಲ್ಲಿ ಮೂಲ ಕೃತಿಕಾರರ ಬಗೆಗೆ ಪರಿಚಯವನ್ನು ದಾಖಲಿಸುವಿಕೆ.
- ಯಾವುದೇ ವಿಷಯದ ಪ್ರಸ್ತಾಪದ ಮುನ್ನ ಕೂಲಂಕಷವಾಗಿ ವಿವಿಧ ಆಧಾರಗಳನ್ನು ಪರಿಶೀಲಿಸಿ ಸೂಕ್ತವಾದುದನ್ನು ದಾಖಲಿಸುವುದು ಮತ್ತು ಆ ದಾಖಲೆಗೆ ಸಂಬಂಧಿಸಿದ ಆಕರಗಳ ಬಗ್ಗೆ ಅಡಿಟಿಪ್ಪಣಿಯಲ್ಲಿ ಸೂಕ್ತ ಸಾಕ್ಷ್ಯಾಧಾರಗಳನ್ನ ಒದಗಿಸಿರುವಿಕೆ.
- ಪಾಠಾಂತರ. ಪಾಠ ಪರೀಷ್ಕರಣೆಗೆ ಅನುಕೂಲವಾಗುವಂತೆ ಸಂಪಾದಿತ ಕೃತಿಗೆ ಪೂರಕವಾಗಿ ಅದೇ ಕೃತಿಯ ವಿವಿಧ ಪ್ರತಿಗಳಿಗೆ ವಿಶೇಷ ಸಂಕೇತಗಳನ್ನು ನೀಡಿ ಪಾಠಾಂತರಗಳನ್ನು ಗುರುತಿಸುವಿಕೆಯ ಪ್ರಮುಖವಾಗಿ ಕಂಡುಬರುತ್ತದೆ.
- ಕಾವ್ಯ, ವಚನ, ಹಾಡುಗಳಂತಹ ಕೃತಿಗಳ ಸಂಪಾದನೆಯಲ್ಲಿಯೂ ಕೃತಿಯ ಛಂದಸ್ಸಿನ ಬಗೆಗೂ ಪ್ರಸ್ತಾವನೆಯಲ್ಲಿ ಚರ್ಚಿಸಿರುವುದು.

- ಅನುಬಂಧದಲ್ಲಿ ಅಕಾರಾದಿಯಾಗಿ ಪದ್ಯಗಳನ್ನು ಕೊಡುವುದು. ಶಿವದಾಸರ ಹಾಡುಗಳ ಸಂಪಾದನೆಯ ಸಂದರ್ಭದಲ್ಲಿ ಶಿವಶರಣರ ಅಂಕಿತದೊಂದೊಡಗೂಡಿದ ಪಲ್ಲವಿಗಳ ಅಕರಾದಿಯಾಗಿ ಹಾಡುಗಳನ್ನು ನೀಡಿರುವುದನ್ನು ಕಾಣಬಹುದು. ಅಲ್ಲದೆ ಅಕಾರಾದಿಯಾಗಿ ಕಠಿಣ ಪದಗಳ ಅರ್ಥವನ್ನು ಓದುಗರಿಗೆ ಅನುವು ಆಗಲೆಂಬಂತೆ ನೀಡಿರುವುದು. ಪಲ್ಲವಿಗಳ ಅಕಾರಾದಿಯ ಜೊತೆಗೆ ಆಯಾ ಹಾಡಿನ ಪುಟವನ್ನು ಕೊಡುವುದು. ಶಿವದಾಸರು ತಮ್ಮಯ ಹಾಡುಗಳಲ್ಲಿ ಬಳಸಿರುವ ಅಂಕಿತಗಳ ಭಿನ್ನತೆಯನ್ನು ಗುರುತಿಸಿ, ಹಾಗೆಯೇ ಹಾಡುಗಳ ವ್ಯಾಖ್ಯಾನಗಳ ಜೊತೆಗೆ ಕೃತಿಯ ಕೊನೆಗೆ ನೀಡುವುದು. ಹೀಗೆ ವೈಶಿಷ್ಟ್ಯಪೂರ್ಣವಾದ ಸಂಪಾದನೆಯ ವೈಧಾನಿಕತೆಯನ್ನು ಇತರ ಸಂಪಾದಕರ ಸಂಪಾದನೆಗಳಲ್ಲಿ ಗುರುತಿಸುವುದು ಅತೀ ವಿರಳ ಎನ್ನಬಹುದು.

ಇದಕ್ಕೆ ಸರಳವಾಗಿ ಶಿವದಾಸ ಗೀತಾಂಜಲಿಯ ಸಂಪಾದನ ವಿಧಾನವನ್ನು ಗಮನಿಸುವುದರ ಮೂಲಕ ಎಲ್. ಬಸವರಾಜು ಅವರ ಸಂಪಾದನೆಯ ವಿಶಿಷ್ಟತೆ ವ್ಯಾಪ್ತಿ, ಆಳವನ್ನು ನೋಡಬಹುದು.

'ಶಿವದಾಸ ಗೀತಾಂಜಲಿ' ಸಂಪಾದಿತ ಕೃತಿಯೂ ಶಿವಶರಣರ ಆದಿಯಾಗಿ ವಚನಗಳ ಜೊತೆ ಜೊತೆಗೆ ರಚಿತವಾದ ಹಾಡುಗಳನ್ನು ಒಳಗೊಂಡ, ಇಪ್ಪತ್ನಾಲ್ಕಕ್ಕೂ ಅಧಿಕ ಸ್ವರ ವಚನಕಾರರ ಇನ್ನೂರ ನಲವತ್ತಕ್ಕೂ ಅಧಿಕ ಸ್ವರವಚನಗಳನ್ನೊಳಗೊಂಡ ಸಂಪಾದಿತ ಈ ಕೃತಿಯಲ್ಲಿ ಪಾಠ ಪರೀಕ್ಷಿಸಲು ಹಲವಾರು ಆಕರ ಗ್ರಂಥಗಳನ್ನು ಎರವಲು ಪಡೆದಿದ್ದಾರೆ.

| | | | | |
|---|---|---|---|---|
| ೧. | ಮಹಲಿಂಗನ ಏಕೋತ್ತರ ಶತಸ್ಥಲ | ....... | K | ೭೫ (=ರಿ) |
| ೨. | ಮಹಲಿಂಗನ ಏಕೋತ್ತರ ಶತಸ್ಥಲ | ......... | K | ೪೫೦ (=ಓ) |
| ೩. | ಜಕ್ಕಣ್ಣನ ಏಕೋತ್ತರ ಶತಸ್ಥಲ, | ..... | K | ೧೮೮ (=ಜ) |
| ೪. | ಜಕ್ಕಣ್ಣನ ಏಕೋತ್ತರ ಶತಸ್ಥಲ, | .... | K | ೨೯೯ (=ಕ) |
| ೫. | ಜಕ್ಕಣ್ಣನ ಏಕೋತ್ತರ ಶತಸ್ಥಲ, | .... | ನಂ | ೧೩೩೧ (=ಗ) |
| ೬. | ಜಕ್ಕಣ್ಣನ ಏಕೋತ್ತರ ಶತಸ್ಥಲ, | .... | ನಂ | ೧೩೨೧ (=ಪ) |
| ೭. | ಜಕ್ಕಣ್ಣನ ಏಕೋತ್ತರ ಶತಸ್ಥಲ, | .... | ನಂ | ೧೧೨೦ (=ಬ) |
| ೮. | ಜಕ್ಕಣ್ಣನ ಏಕೋತ್ತರ ಶತಸ್ಥಲ, | .... | ನಂ. | ೧೩೬೬ (=ವ) |
| ೯. | ಜಕ್ಕಣ್ಣನ ಏಕೋತ್ತರ ಶತಸ್ಥಲ, | .... | ಸ್ವಂತ | (=ಸ್ವ) |
| ೧೦. | ಶರಣರ ವಚನ ಮತ್ತು ಹಾಡುಗಳು | .... | ಖಾಸಗಿ | (=ಚ) |
| ೧೧. | ಶಿವಯೋಗ ಪ್ರದೀಪಿಕೆ (ಸ್ವರಪದಗಳು) | .... | ೬೨೯ | (=ರಿ) |
| ೧೨. | ಗಣವಚನ ರತ್ನಾವಳಿ | ....[೨] | | |

'K' ಎಂದು ಗುರುತಿಸಲ್ಪಟ್ಟ ಪ್ರತಿಗಳನ್ನು ಮೈಸೂರಿನ ಪ್ರಾಚ್ಯ ವಿದ್ಯಾ ಸಂಶೋಧನಾಲಯದಲ್ಲಿನ ಭಂಡಾರದಿಂದ ತೆಗೆದುಕೊಂಡಿದ್ದಾರೆ. ಇಲ್ಲಿ ಬಸವರಾಜು ಅವರು ಪ್ರತಿಗಳಿಗೆ ರಿ. ಓ ಎಂದು ಹೆಸರಿಟ್ಟು ಕೊಂಡು

ಅವುಗಳ ಭಂಡಾರದ ಸಂಖ್ಯೆಯನ್ನು ನೀಡಿದ್ದಾರೆ. ಪಾಠಾಂತರಗಳನ್ನು ಗುರುತಿಸುವಲ್ಲಿ ಆಯಾ ಪ್ರತಿಯಲ್ಲಿನ ಪಾಠ ಪರಿಷ್ಕರಣಕ್ಕೆ ಸುಲಭವಾಗುವ ದೃಷ್ಟಿಯಿಂದ ಸಂಕೇತಿಸಿದ್ದಾರೆ. ಮೇಲೆ ಸೂಚಿಸಿದ ಪ್ರತಿಗಳೆಲ್ಲ ಮಹಾಲಿಂಗನ 'ಏಕೋತ್ತರ ಶತಸ್ಥಲ'ಕ್ಕೆ ಸಂಬಂಧಿಸಿದ ಬೇರೆ ಬೇರೆ ಲಿಪಿಕಾರರ ಪ್ರತಿಗಳು. ಮಹಾಲಿಂಗನ ಏಕೋತ್ತರ ಶತಸ್ಥಲವು ಶಿವದಾಸರ ಹಾಡುಗಳನ್ನು ಒಳಗೊಂಡ ಸಂಕಲನ. ಮಹಾಲಿಂಗದೇವನು ಮೊದಲ ಬಾರಿಗೆ (೧೯೬೦) ತನ್ನ ಕೃತಿಯಲ್ಲಿ ಸ್ಥಲವೊಂದಕ್ಕೆ ಒಂದರಂತೆ, ಸ್ವರವಚನಗಳನ್ನು ಬಳಸಿದ್ದಾರೆ. ಈ ಕೃತಿಯ ಬಗೆಗೆ ಸಿಗುವ ವಿವಿಧ ಲಿಪಿಕಾರರ ಪ್ರತಿಗಳಿಂದ ಸ್ವರವಚನವನ್ನು ಆಯ್ದುಕೊಂಡಿದ್ದಾರೆ. ಅಲ್ಲದೆ 'ರಿ' ಮತ್ತು 'ಓ' ಪ್ರತಿಯಲ್ಲಿ ಹಾಡುಗಳ ಜೊತೆಗೆ ಇತರ ಪಾಠವನ್ನು ಸೂಚಿಸಿದ್ದು, ಇವೆರಡು ಓಲೆಪ್ರತಿಗಳ ಹಾಡುಗಳು ಒಳಗೊಂಡು ವಿವರಗಳನ್ನು ಪ್ರಸ್ತಾಪಿಸಿದ್ದಾರೆ.

ಅದರಂತೇ ಜಕ್ಕಣ್ಣನ ಏಕೋತ್ತರ ಶತಸ್ಥಲಕ್ಕೆ ಸಂಬಂಧಿಸಿದ ಏಳು ಪ್ರತಿಗಳನ್ನು ಪಡೆದುಕೊಂಡು ಅವುಗಳಲ್ಲಿ 'ಜ', 'ಕ' ಪ್ರತಿಗಳು ಮೈಸೂರಿನ ಪ್ರಾಚ್ಯ ವಿದ್ಯಾ ಸಂಶೋಧನಾಲಯದಿಂದ, ಗ, ಪ, ಬ, ವ ಪ್ರತಿಗಳನ್ನು ಮೈಸೂರಿನ ಸಂಸ್ಕೃತ ಕಾಲೇಜಿನ ಸರಸ್ವತಿ ಭಂಡಾರದಿಂದ ಉಳಿದ ಇನ್ನೊಂದು ಓಲೆಪ್ರತಿಯನ್ನು ಸ್ವಂತ ಪ್ರತಿಯನ್ನೇ ಬಳಸಿಕೊಂಡಿದ್ದಾರೆ. ಇವುಗಳಲ್ಲಿ ಕಾಲದ, ಭಾಷೆಯ ದೃಷ್ಟಿಯಿಂದ ಪ್ರಾಚೀನವಾದ ಶುದ್ಧ ಓಲೆಗರಿಯನ್ನು ಪ್ರಮುಖವಾಗಿಟ್ಟುಕೊಂಡು ಉಳಿದವುಗಳನ್ನು ಪೂರಕವಾಗಿ ಪಾಠಾಂತರ, ಪಾಠ ಪರಿಷ್ಕರಣಗಳಲ್ಲಿ ಬಳಸಿಕೊಂಡಿದ್ದಾರೆ. ಅಲ್ಲದೆ ಆಯಾ ಪ್ರತಿಗಳು ಒಳಗೊಂಡ ಹಾಡುಗಳೇತರ ಸಾಹಿತ್ಯವನ್ನು ಮನಗಂಡು ಸಂಕ್ಷಿಪ್ತವಾಗಿ ಆಯಾ ಓಲೆ ಗ್ರಂಥಗಳ ಪರಿಚಯದಲ್ಲಿ ವಿವರಿಸಿದ್ದಾರೆ. ಜೊತೆಗೆ ಸಾಮ್ಯತೆಯಿಂದೊಡಗೂಡಿದ ಪ್ರತಿಗಳನ್ನು ಹೆಸರಿಸಿದ್ದಾರೆ. ಯಾವ ಅಂಶದಲ್ಲಿ ಸಾಮ್ಯತೆಗಳು ಇವೆ, ಎಲ್ಲಿ ಭಿನ್ನತೆ ಇದೆ ಎಂಬುದನ್ನು ಓಲೆಗ್ರಂಥಗಳ ಜೊತೆ ಒಳಗೊಂಡ ವಿಚಾರವು ಓದುಗರಿಗೆ ಈ ಸಂಪಾದನೆ ಕೃತಿಯಿಂದ ಲಭ್ಯವಾಗುತ್ತದೆ.

ಜಕ್ಕಣ್ಣನ ಏಕೋತ್ತರ ಶತಸ್ಥಲ, ಮಹಾಲಿಂಗನ ಏಕೋತ್ತರ ಶತಸ್ಥಲದ ಜೊತೆಗೆ ಹಾಡುಗಳ ಸಂಪಾದನೆಗೆ ಎಲ್. ಬಸವರಾಜು ಅವರು ಖಾಸಗಿಯವರಿಂದ 'ಶರಣರ ವಚನ ಮತ್ತು ಹಾಡುಗಳು', 'ಶಿವಯೋಗ ಪ್ರದೀಪಿಕೆ', 'ಗಣವಚನ ರತ್ನಾವಳಿ'ಯ ಓಲೆಗ್ರಂಥಗಳನ್ನು ಎರವಲು ಪಡೆದುಕೊಂಡಿದ್ದಾರೆ. ಇದರಲ್ಲಿ ಗ್ರಹಿಸಬಹುದಾದ ಪ್ರಮುಖ ಅಂಶವೆಂದರೆ ಬಸವರಾಜು ಅವರು ಯಾವುದೇ ಪಾಠವನ್ನು ಸುಲಭವಾಗಿ ಒಪ್ಪುವವರಲ್ಲ. ಪ್ರತಿ ಪಾಠಕ್ಕೂ ವಿವಿಧ ಓಲೆಗ್ರಂಥಗಳಿಂದ ಪಾಠ ಪರಿಷ್ಕರಣ ಮಾಡಿ, ಅಡಿಯಲ್ಲಿ ಆಯಾ ಪ್ರತಿಯಲ್ಲಿನ ಪಾಠವನ್ನು ನೀಡುವುದು, ಅಷ್ಟಾಗಿಯೂ ಪಾಠ ಶುದ್ಧ ಅನಿಸದೇ ಇದ್ದಲ್ಲಿ ತಾವೇ ಊಹಾತ್ಮಕ ಪಾಠವನ್ನು ನೀಡುವುದು ಕಂಡುಬರುತ್ತದೆ.

ಎಲ್. ಬಸವರಾಜು ಅವರ ಸಂಪಾದನೆಯಲ್ಲಿ ಎದ್ದು ಕಾಣುವ ಮತ್ತೊಂದು ಅಂಶವೆಂದರೆ ಅವರು ನೀಡುವ ಕೃತಿ ಆರಂಭದ ಪ್ರಸ್ತಾವನೆ: 'ಅಲ್ಲಮ ವಚನ ಚಂದ್ರಿಕೆ', 'ಶಿವದಾಸ ಗೀತಾಂಜಲಿ'ಯಂತಹ ಶಿವದಾಸರ ಹಾಡುಗಳ ಸಂಕಲನದ ಕೃತಿಸಂಪಾದನೆಯಲ್ಲಿ ಅಧ್ಯಯನಕ್ಕೆ ಪೂರಕವಾಗಿ ನೀಡುವ ದೀರ್ಘ ಪ್ರಸ್ತಾವನೆಯೂ ಪ್ರಮುಖವಾದುದು. 'ಅಲ್ಲಮ ವಚನ ಚಂದ್ರಿಕೆ'ಯೂ ಪ್ರಭುದೇವರ ವಚನಗಳು ಸ್ವರವಚನಗಳಿಂದ ಕೂಡಿದ

ಸಂಪಾದಿತ ಕೃತಿ. ಈ ಕೃತಿಯಲ್ಲಿ ವಚನಕಾರರಲ್ಲಿ ಪ್ರಮುಖನಾದ ಅಲ್ಲಮಪ್ರಭುವಿನ ಬಗೆಗೆ ವಿವರಿಸುವ ಪ್ರಾರಂಭದಲ್ಲಿ ವಿವಿಧ ವಚನಕಾರರು ಇದ್ದರು ಎಂಬುದಕ್ಕೆ ವಿವಿಧ ಆಧಾರಗಳನ್ನು ಹಾಗೂ ಅದನ್ನು ಸಾಬೀತುಪಡಿಸಿದ ವಿದ್ವಾಂಸರ ಹೇಳಿಕೆಗಳನ್ನು ಸೂಕ್ತವಾದ ಆಧಾರಗಳನ್ನು ನೀಡುತ್ತಾ ವಚನಕಾರರ ಇರುವಿಕೆಯನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ. ಹಾಗೆಯೇ ಅಲ್ಲಮನ ಪರಂಪರೆಯನ್ನು ವಿವರಿಸುವುದರ ಜೊತೆಗೆ ಅಲ್ಲಮನ ಬಾಲ್ಯ, ಜೀವನ, ಗುರು ಉಪದೇಶ, ಐಕ್ಯದವರೆಗಿನ ಪರಿಚಯವನ್ನು ಹೇಳಲಾಗಿದೆ. ಇದಕ್ಕೆ ಪೂರಕವೆಂಬಂತೆ ಐತಿಹ್ಯ ರೂಪದ ಆಧಾರಗಳನ್ನು ಹರಿಹರನಂತೆ ರಗಳೆಗಳನ್ನು ಬಳಸಿಕೊಂಡು ವಿವರ ನೀಡಿದ್ದಾರೆ. ಪ್ರತಿ ಹೇಳಿಕೆಗಳನ್ನು ತಾವಾಗಿಯೇ ಹೇಳಿದೆ ಎಲ್ಲಕ್ಕೂ ಆಧಾರಗಳನ್ನು ನೀಡುತ್ತಾ ತಮ್ಮ ವಿಷಯವನ್ನು ಪ್ರಸ್ತುತಪಡಿಸುತ್ತಾ ಹೋಗುತ್ತಾರೆ.

'ಶಿವದಾಸ ಗೀತಾಂಜಲಿ'ಯಲ್ಲಿ ಹಾಡುಗಳನ್ನು ರಚಿಸಿರುವ ಸ್ವರವಚನಕಾರರನ್ನು ಶಿವದಾಸರೆಂದೇ ಕರೆದಿದ್ದಾರೆ 'ದಾಸ' ಎಂದರೆ ತನ್ನ ಇಷ್ಟವಾದ ದೇವನನ್ನು ಹಾಡುತ್ತ ಸ್ತುತಿಸುವುದು ಎಂದರ್ಥ. ಅಲ್ಲದೆ ಈ ಗ್ರಂಥದಲ್ಲಿ ಶಿವನನ್ನು ಸ್ತುತಿಸುವ ಗೀತೆಗಳು, ಒಬ್ಬ ಸಾಮಾನ್ಯ ಭಕ್ತ ಶಿವನಲ್ಲಿ ಮೋಕ್ಷ ಹೊಂದಲು ಅವನು ಅನುಸರಿಸಬೇಕಾದ ಆಚರಣೆ, ತತ್ತ್ವಗಳನ್ನು ಒಳಗೊಂಡ ಹಾಡುಗಳನ್ನು ಶಿವನ ಆರಾಧಕರಾದ ವಚನಕಾರಾದಿಯಾದಿ ಅನೇಕ ಸ್ವರವಚನಕಾರರನ್ನು 'ಶಿವದಾಸ'ರೆಂದೆ ಹೇಳುತ್ತಾರೆ. ಈ ಗ್ರಂಥದ ಪ್ರಸ್ತಾವನೆಯಲ್ಲಿ ಎಲ್. ಬಸವರಾಜು ಅವರು 'ಶೈವ-ವೀರಶೈವ'. 'ವೀರಶೈವ ಸಾಹಿತ್ಯಕ್ಕೆ ಸಂಸ್ಕೃತದ ಹಿನ್ನೆಲೆ, ವಚನಸಾಹಿತ್ಯ, ವಚನ ಗೀತೆಗಳ ಸಂಕಲನ ಮತ್ತು ವ್ಯಾಖ್ಯಾನ, ಶರಣರ ಕೃತಿಪ್ರಕಾರಗಳು, ಗೀತೆಗಳ ಆಕರ ಮತ್ತು ಕರ್ತೃಗಳು. ಪದ ಅಥವಾ ಹಾಡು ಮತ್ತು ಅವುಗಳಿಂದಾದ ಪ್ರಬಂಧ ವಿಶೇಷಗಳು, ಸಂಗೀತ ಸಾಹಿತ್ಯ ನೃತ್ಯಕ್ಕೆ ಶರಣರ ಕೊಡುಗೆ. ಶರಣರ ಹಾಡುಗಳ ಸಾಹಿತ್ಯತೆಯ ಚರಿತ್ರೆ, ಕೆಲವು ವಾಗ್ಗೇಯಕಾರರ ವೃತ್ತಾಂಶ, ಹಾಡುಗಳ ಛಂದಸ್ಸು, ಹಾಡುಗಳನ್ನು ಬಳಸಿಕೊಂಡಿರುವ ಸಂಕೇತಗಳ ವಿವರ, ಹೀಗೆ ವಿವಿಧ ಅಧ್ಯಾಯ ರೂಪದ ಲೇಖನಗಳು ವೀರಶೈವದ ಪ್ರಾದೇಶಿಕತೆ, ಶೈವ ಅದರ ಒಳಪಂಗಡಗಳಾದ ಕಾಳಮುಖ, ಪಾಶುಪತ, ಲಕುಲೀಶ, ವೀರಶೈವ ಪಂಗಡಗಳ ವಿಶೇಷ ಲಕ್ಷಣ, ಆಚಾರ ವಿಧಿ ವಿಧಾನಗಳನ್ನು ಅವು ವೀರಶೈವ ಧರ್ಮದಲ್ಲಿ ಹೇಗೆ ಭಿನ್ನ ರೂಪ ಪಡೆದವು ಎನ್ನುವುದನ್ನು ಸೂಕ್ತ ಆಧಾರಗಳ ಮೂಲಕ ವಿವರಿಸಿದ್ದಾರೆ. ಹಾಗೆಯೇ ಬಸವಾದಿ ಶರಣರ ಕಾಲಕ್ಕೆ ಪ್ರಚಲಿತಕ್ಕೆ ಬಂದ ವೀರಶೈವ ಧರ್ಮದ ಉಗಮವನ್ನು ಹೀಗೆ ಹೇಳಿದ್ದಾರೆ.

"ವೀರಶೈವವು ಪಾಶುಪತಗೋತ್ರದಿಂದ ಒಂದು ಪ್ರಬೇಧವಾಗಿ ಉಗಮಿಸಿ, ಅರವತ್ತುಮೂರು ಪುರಾತನರ ನೂತನ ದೃಷ್ಟಿ ಜಲದಿಂದ ಪರಿಪೋಷಿತವಾಗಿ, ಷೋಡಶ-ತೇರಸ-ದಶಗಣ ಸ್ಥಾನಗಳಲ್ಲಿ ಧುಮುಕಿ ಭೋರ್ಗರೆದು, ಬಸವಾದಿ ಪ್ರಮಥರ ವೇಳೆಯಲ್ಲಿ ಜನಾಂತಃಕರಣ-ಚಂದ್ರಶೀತಲ ಕಿರಣ ಸ್ಪರ್ಶಿಯಾಗಿ ಉಕ್ಕಿ ಕರ್ನಾಟಕಾಂದ್ರ ದೇಶಗಳಾದ್ಯಂತ ವ್ಯಾಪಕವಾಗಿ ಹರಡಿ, ಮಹಾರಾಷ್ಟ್ರ ತಮಿಳ್ನಾಡುಗಳ ಅಂಚುಗಳಲ್ಲಿ ಮಿಂಚಿ ಮನೋಹರವಾಯಿತು."[೮]

ಬಸವಾದಿ ಪ್ರಮಥರ ವೀರಶೈವ ಸಾಹಿತ್ಯಕ್ಕೆ ಸಂಸ್ಕೃತದ ಪ್ರಭಾವವು ಇದೆ. "ಬಸವಾದಿ ಪ್ರಮಥರಿಗಾದರೋ ಸಂಸ್ಕೃತದ ಬಗ್ಗೆ ದ್ವೇಷವಾಗಲಿ, ವ್ಯಾಮೋಹವಾಗಲಿ ಇಲ್ಲ. ಕನ್ನಡದ ಬಗ್ಗೆ ಅಭಿಮಾನವೂ ಭರವಸೆಯೂ

ಇದ್ದುದು ಅವರವರ ಚಿತ್ತವನ್ನು, ಸಾಮಾನ್ಯದಲ್ಲಿ ಹುದುಗಿರುವ ಸಾಧ್ಯತೆಗಳನ್ನು ಗುರುತಿಸುವ ಕಾಣ್ಕೆಯನ್ನು ತೋರಿಸುತ್ತದೆ" ಎಂದು ತಿಳಿಸುವುದರ ಮೂಲಕ ಶರಣರ, ವೀರಶೈವದ ಕವಿಗಳ, ವಚನ ಕೃತಿ, ಹಾಡುಗಳಲ್ಲಿ ಹುದುಗಿರಬಹುದಾದ ಸಂಸ್ಕೃತದ ಪ್ರಭಾವವನ್ನು ವ್ಯಕ್ತಪಡಿಸುತ್ತಾರೆ. ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯನ ಕೃತಿ, ಚೆನ್ನಬಸವಣ್ಣ ಭಸ್ಮ ಮಹಾತ್ಮ್ಯ, ಅಲ್ಲಮಪ್ರಭು ಜಂಗಮ ಲಕ್ಷ್ಮಣವನ್ನು ಹೇಳುವಲ್ಲಿ ಸಂಸ್ಕೃತದ ಶಿವರಹಸ್ಯ ಉಲ್ಲೇಖ ಮಾಡಿರುವುದು, ವೀರಶೈವ ಸಾಹಿತ್ಯದ ಇತಿಹಾಸದಲ್ಲಿ ವೇದಾಗಮ ಪುರಾಣಾದಿಗಳ ಉಲ್ಲೇಖವನ್ನು ತಿಳಿಸುವುದರ ಜೊತೆಗೆ ವೀರಶೈವ ಸಾಹಿತ್ಯ ಹುಟ್ಟುವ ಮುಂಚೆಯೇ ಸಾಕಷ್ಟು ಸಂಸ್ಕೃತ ಸಾಹಿತ್ಯ ಬೆಳೆದಿತ್ತೆಂಬುದನ್ನು ಐವತ್ತಕ್ಕೂ ಅಧಿಕ ಸಂಸ್ಕೃತ ಕೃತಿಗಳ ಉಲ್ಲೇಖವನ್ನು ಮಾಡುತ್ತಾರೆ. ವೀರಶೈವ ತತ್ತ್ವ ಉಪದೇಶಗಳನ್ನು ಪೂರ್ವದಲ್ಲಿ ಆಗಮ ಪುರಾಣಾದಿಗಳು ಬೋಧಿಸಿದವು. ಹೀಗೆ ಮೇಲಿನವುಗಳ ಜೊತೆಗೆ ಇನ್ನು ಅನೇಕ ಉದಾಹರಣೆಗಳನ್ನು ನೀಡುತ್ತಾ ಒಂದಲ್ಲ ಒಂದು ರೀತಿಯಲ್ಲಿ ಸಂಸ್ಕೃತದ ಪ್ರಭಾವವು ಕನ್ನಡ ಸಾಹಿತ್ಯ ಅದರಲ್ಲೂ ವೀರಶೈವ ಸಾಹಿತ್ಯದ ಮೇಲೆ ಆಗಿತ್ತೆಂಬುದನ್ನು ವಿವರಿಸಿದ್ದಾರೆ.

ವಚನಸಾಹಿತ್ಯದ ಬಗೆಗೆ ಉಲ್ಲೇಖಿಸುತ್ತಾ ಕೊಂಡುಗುಳಿ ಕೇಶಿರಾಜನ ಆದಿಯಾಗಿ ವಚನ ಸಾಹಿತ್ಯವು ಹುಟ್ಟಿಕೊಂಡಿತು. ಈ ಸಾಹಿತ್ಯದ ರೂಪ, ವಸ್ತು, ಹಿನ್ನೆಲೆಯೂ ಏನಾಗಿತ್ತು. ಮುಂದೆ ಹೇಗೆ ಸಾಗಿತು ಎನ್ನುವ ಚಿತ್ರಣವನ್ನು ಎಲ್. ಬಸವರಾಜು ತಿಳಿಸಲು ಪ್ರಯತ್ನಿಸಿದ್ದಾರೆ.

ಬಸವಾದಿ ಶರಣರಿಂದ ರಚನೆಗೊಂಡ ವಚನಸಾಹಿತ್ಯವನ್ನು ಮುಂದಣ ಕವಿಗಳಾದ ಹರಿಹರ, ರಾಘವಾಂಕ, ಭೀಮಕವಿಯಂಥವರು. ವಚನ ಧರ್ಮ ಸಾಹಿತ್ಯವನ್ನು ಪ್ರಸಾರಮಾಡಲು ವಚನಕಾರರ ಜೀವನ ಚರಿತ್ರೆಗಳನ್ನು ಕಾವ್ಯವಾಗಿ ಕಟ್ಟುವುದರ ಮೂಲಕ ಜನರಲ್ಲಿ ಬಸವಾದಿ ವಚನಕಾರರ ಬಗ್ಗೆ ಭಕ್ತಿ ಹುಟ್ಟಿಸಿ ಅದರ ಮೂಲಕ ವಚನ ಸಾಹಿತ್ಯದ ಮಾತೃಕೆಯಾದ ವೀರಶೈವ ಧರ್ಮವನ್ನು ಜನರಲ್ಲಿ ಉಳಿಯುವಂತೆ ಮಾಡಿದರು. ಇದನ್ನು ಮನಗಂಡಿದ್ದ ಮಹಾಲಿಂಗ, ಜಕ್ಕಣ್ಣರು ತಮ್ಮ ಏಕೋತ್ತರ ಶತಸ್ಥಲದಲ್ಲಿ ಬಸವಾದಿ ವಚನಕಾರರಾದಿಯಾಗಿ ಅನೇಕರ ವಚನಗಳ ಜೊತೆಗೆ ಹಾಡುಗಳನ್ನು ತಮ್ಮಯ ಗ್ರಂಥಗಳಲ್ಲಿ ಸಂಕಲಿಸುವುದರ ಮೂಲಕ ಜನರಿಗೆ ಪಾಠ ದೃಷ್ಟಿಯಿಂದ, ಸಂಖ್ಯೆಯ ದೃಷ್ಟಿಯಿಂದ ಸುಲಭವಾಗಬಹುದೆಂದು ಮನಗಂಡು, ಷಟ್‌ಸ್ಥಲ ಸಿದ್ಧಾಂತದ ಹಿನ್ನೆಲೆಯಲ್ಲಿ ಒಂದೊಂದು ಸ್ಥಳಕ್ಕೆ ಒಂದೊಂದು ಹಾಡುಗಳನ್ನು ಸೇರಿಸಿ ಸಂಕಲಿಸಿದರು. ಇದರಿಂದ ವಚನಕಾರರು ವಚನಗಳ ಜೊತೆಗೆ ಹಾಡುಗಳನ್ನು, ವೀರಶೈವ ವಚನಕಾರರನ್ನು ಕೃತಿಯಲ್ಲಿ ತಂದರೆಂಬುದನ್ನು ಜಕ್ಕಣ್ಣ ಏಕೋತ್ತರ ಶತಸ್ಥಲ, ಮಹಾಲಿಂಗ ಶತಸ್ಥಲದ ಉದಾಹರಣೆಗಳ ಮೂಲಕ ತಿಳಿಸಿದ್ದಾರೆ.

ತೋಂಟದ ಸಿದ್ಧಲಿಂಗ ಶರಣನ ಕಾಲದಲ್ಲಿಯೂ ಸಂಕಲನ ಕಾರ್ಯವು ನಡೆಯುವದರ ಜೊತೆಗೆ ವ್ಯಾಖ್ಯಾನ ಪರಿಪಾಠವೂ ನಡೆಯಿತು. ಇದು ಮುಂದೆ ಶೂನ್ಯಸಂಪಾದನಕಾರರಲ್ಲಿ ನಡೆದು ಬಂದ ಬಗೆಯನ್ನು, ನಾಲ್ಕು ಶೂನ್ಯಸಂಪಾದನೆಗಳನ್ನು ಸೋದರಣವಾಗಿ ವಿವರಿಸುತ್ತಾ ಆಯಾ ಕಾಲದ ಹಿನ್ನೆಲೆಯಲ್ಲಿ ವೀರಶೈವ ಸಾಹಿತ್ಯ ಅದರಲ್ಲಿ ವಚನ ಹಾಗೂ ಹಾಡಿನ ಪ್ರಕಾರಗಳು ಹೀಗೆ ಸಾಗಿಬಂದವೆನ್ನುವ ಅಂಶವನ್ನು ಸ್ಥೂಲವಾಗಿ ಟೀಕಾ ಅಧ್ಯಯನದಲ್ಲಿ ವ್ಯಕ್ತಪಡಿಸಿದ್ದಾರೆ.

ಸ್ವರ ವಚನಗಳು ಯಾವ ಕಾಲಘಟ್ಟದಲ್ಲಿ ಕಂಡುಬರುತ್ತವೆ. ಹೇಗೆ ಮುಂದೆವರೆದುಕೊಂಡು ಬಂದವು ಎನ್ನುವ ಸಂಶಯದಲ್ಲಿರುವ ಅಧ್ಯಯನಕಾರರಿಗೆ ವೀರಶೈವ ಪ್ರಾಥಮಿಕ ಹುಟ್ಟಿನಿಂದ ಹೇಗೆ ಸಾಗುತ್ತಾ ಬಂದಿತು. ಅದರ ಮೇಲಣ ಇತರ ಸಾಹಿತ್ಯಗಳ ಪ್ರಭಾವ, ಪರಿಣಾಮ ಎಂಥಹುದು ಎಂಬುದನ್ನು ಈ ಗ್ರಂಥದ ಪೀಠಿಕಾ ಅಧ್ಯಯನದಲ್ಲಿ ತಿಳಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ.

ಪುಟ.೪೪-೪೫ ರ ನಡುವೆ ಶೂನ್ಯ ಸಂಪಾದನೆಗಳು ಒಳಗೊಂಡು ಅಂಶಗಳು ಶಿವಗಣ ಪ್ರಸಾದಿ ಮಹಾದೇವಯ್ಯ, ಹಲಗೆಯಾರ್ಯ, ಗುರುಸಿದ್ಧಲಿಂಗ ಒಡೆಯರ್, ಗೋಮ್ಮಳಾಪುರ ಸಿದ್ದಲಿಂಗಯತಿಗಳ ಶೂನ್ಯಸಂಪಾದನೆಗಳನ್ನು ಕೊಟ್ಟು, ಯಾವ ಅಂಶಗಳು, ಶೂನ್ಯ ಸಂಪಾದನಕಾರರಲ್ಲಿ ವ್ಯತ್ಯಾಸದಿಂದ ಕೂಡಿದೆಯೆಂಬುದನ್ನು ನಕ್ಷೆಯ ಮೂಲಕ ತಿಳಿಸಿದರೆ, ಅದರಂತೆ ತೋಂಟದ ಸಿದ್ಧಲಿಂಗೇಶ್ವರರಾದಿಯಾಗಿ ಗುರು ಶಿಷ್ಯರ ಪರಂಪರೆಯ ನಕ್ಷೆಯನ್ನು ಅಧ್ಯಯನ ದೃಷ್ಟಿಯಿಂದ ಕೊಟ್ಟಿದ್ದಾರೆ.

ವಚನಕಾರಾದಿಯಾಗಿ ಬಂದ ಅನೇಕ ಶರಣರು ವಚನಗಳನ್ನು ಮಾತ್ರ ರಚಿಸದೇ ಅದರ ಜೊತೆಗೆ ಇತರ ಸಾಹಿತ್ಯ ರಚಿಸುವುದರ ಮೂಲಕ ಪ್ರಮುಖರಾಗಿದ್ದಾರೆ. ಅಷ್ಟಕ, ಶತಕ, ತಾರಾವಳಿ, ಕಾಲಜ್ಞಾನ, ನಾಂದ್ಯ, ಉದ್ಧರಣೆ ವಾಚ್ಯ, ಬೊಲ್ಲಿ ಮುಂತಾದ ಸಾಹಿತ್ಯ ಪ್ರಕಾರಗಳನ್ನು ರಚಿಸಿದ್ದಾರೆಂಬುದನ್ನು ಸಿದ್ಧರಾಮನ ಬಸವಸ್ತೋತ್ರ ತ್ರಿವಿಧಿ, ಅಕ್ಕಮಹಾದೇವಿಯ ಯೋಗಾಂಗ ತ್ರಿವಿಧಿಯಂತಹ ಉದಾಹರಣೆಗಳನ್ನು ನೀಡಿ ಅಧ್ಯಯನಕಾರರ ಜ್ಞಾನದ ವಿಸ್ತಾರವನ್ನು ಮತ್ತಷ್ಟು ಹೆಚ್ಚಿಸಿದ್ದಾರೆ.

ಶಿವದಾಸ ಹಾಡುಗಳ ಬಗೆಗೆ ವಿವರಿಸುವ ಮುನ್ನ ವೀರಶೈವ, ವೀರಶೈವ ಸಾಹಿತ್ಯದ ಮೇಲೆ ಸಂಸ್ಕೃತದ ಪ್ರಭಾವ, ವಚನ ಸಾಹಿತ್ಯ, ವಚನ ಗೀತೆಗಳ ಸಂಕಲನ ಮತ್ತು ವ್ಯಾಖ್ಯಾನ. ಶರಣರ ಕೃತಿ ಪ್ರಕಾರಗಳಂತಹ ವಿಚಾರವನ್ನು ಪ್ರಸ್ತಾಪಿಸುವ ಪ್ರಮುಖ ಉದ್ದೇಶ ಹಾಡುಗಳ ಸಾಹಿತ್ಯ ರಚನಕಾರರ ಪೂರ್ವ ಹಿನ್ನೆಲೆ, ಧ್ಯೇಯೋದ್ದೇಶಗಳು, ತತ್ತ್ವಚಿಂತನೆ, ಕಾಲದ ಸಂದರ್ಭಿಕ ಪರಿಸ್ಥಿತಿ ಮುಂತಾದವುಗಳನ್ನು ಅಧ್ಯಯನಕಾರರು ತಿಳಿದಿದ್ದಾಗ ಸ್ವರವಚನಗಳ ತಾತ್ವಿಕ ವಿಚಾರಗಳನ್ನು ಸುಲಭವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಅಧ್ಯಯನಕಾರನಿಗೆ ಪೂರ್ವ ಹಿನ್ನೆಲೆಯಲ್ಲಿ ಈ ಬಗೆಗೆ ತಿಳಿದಲ್ಲಿ ಹೆಚ್ಚು ಸೂಕ್ತವೆಂಬ ಅಭಿಮತವನ್ನು ಬಸವರಾಜು ಅವರು ಹೊಂದಿರಬೇಕು.

ಹಿಂದೆಲ್ಲ ವೀರಶೈವ ಧರ್ಮದ ಹಿನ್ನೆಲೆ ಹಾಗೂ ವಚನ ಸಾಹಿತ್ಯ ಬೆಳೆದು ಬಂದ ಬಗೆಗೆ ಹೇಳಲಾಗಿದ್ದು, ವಚನಗಳನ್ನು ರಚಿಸಿದ ಶಿವಶರಣರು ತತ್‌ಕಾಲಕ್ಕೆ ಹಾಡುಗಳನ್ನು ರಚಿಸಿದರು. ಪಲ್ಲವಿ ಅನುಪಲ್ಲವಿ, ರಾಗ ತಾಳಗಳನ್ನು ಈ ಹಾಡುಗಳು ಆಧ್ಯಾತ್ಮದಂತಹ ವಸ್ತುವಿನಿಂದ ಹಿಡಿದು ಲೋಕ ನೀತಿ, ಚಂದಮಾಮದಂತಹ ಗೀತೆಗಳವರೆಗೂ ರಚಿಸಿದರು. ಕರ್ನಾಟಕ ಸಂಗೀತಕ್ಕೆ ಹರಿದಾಸರೇ ಆದ್ಯರೆಂದು ಹೇಳಲಾಗುತ್ತದೆ. ಆದರೆ ಎಲ್. ಬಸವರಾಜು ಅವರು ಶಿವದಾಸರೇ ಸಂಗೀತ ಲೋಕಕ್ಕೆ ಆದ್ಯರೆಂದು. ೧೨ನೇ ಶತಮಾನದ ಬಸವಾದಿ ಶಿವದಾಸರ ಈ ಗೀತ (ಹಾಡುಗಳ) ಪ್ರಕಾರವು ಕೀರ್ತನ ಸಾಹಿತ್ಯಕ್ಕೆ ಮೂಲವೂ ಮಾದರಿಯೂ ಆಗಿದೆ ಎಂಬ ಅಭಿಮತ ವ್ಯಕ್ತಪಡಿಸುತ್ತಾ ಅದನ್ನು ಸಾಭೀತುಪಡಿಸಲು ಹಾಡುಗಳ ಮೂಲವನ್ನು ಹುಡುಕುತ್ತಾರೆ.

- ಮಹಲಿಂಗ, ಜಕ್ಕಣ್ಣ ಮತ್ತು ಸಿದ್ಧಲಿಂಗೇಶ್ವರ ಏಕೋತ್ತರ ಶತಸ್ಥಲಗಳು.
- ಶೂನ್ಯ ಸಂಪಾದನೆಗಳು.
- ಶಿವಯೋಗ ಪ್ರದೀಪಿಕೆ.
- ಸಿಂಗಿರಾಜ ಪುರಾಣದಂತಹ ವೀರಶೈವ ಪುರಾಣ ಮತ್ತು ಧಾರ್ಮಿಕ ಗ್ರಂಥಗಳು.

ಇವುಗಳಲ್ಲಿ ದೊರೆಯುವ ಹಾಡುಗಳು ಬಸವಾದಿ ಅನೇಕ ಸ್ವರವಚನಕಾರರ ಹಾಡುಗಳನ್ನು ಒಳಗೊಂಡ ಸಂಕಲನ ಗ್ರಂಥಗಳಾಗಿದ್ದು. ಶಿವದಾಸರೇ ಹಾಡುಗಳನ್ನು ರಚಿಸಿದ್ದಾರೆಂಬುದನ್ನು ಸಾಬೀತುಪಡಿಸುತ್ತವೆಂಬುದನ್ನು ಎಲ್. ಬಸವರಾಜು ಅವರು ಅದರೊಳಗಿನ ಹಾಡುಗಳನ್ನು ವಿವರಿಸುತ್ತಾ ಹರಿದಾಸರಿಗಿಂತ ಶಿವದಾಸರೇ ಸಂಗೀತಕ್ಕೆ ಆದ್ಯರು ಎಂಬುದನ್ನು ಪ್ರಸ್ತುತಪಡಿಸಿದ್ದಾರೆ.

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ವಚನಕಾರರಿಂದ ಆರಂಭವಾದ ಹಾಡಿನ ಪ್ರಕಾರವು ಎಷ್ಟು ಪ್ರಾಚೀನವಾದುದು ಎಂಬುದನ್ನು ತಿಳಿಸಲು ಕವಿರಾಜ ಮಾರ್ಗದ ಆದಿಯಾಗಿ ಬಳಕೆಗೊಂಡು ಚೆತ್ತಣ ಬೆದಂಡೆಗಳಲ್ಲಿ ಹಾಡಿನ ಪ್ರಕಾರಕ್ಕೆ ಮೂಲ. ಕವಿರಾಜ ಮಾರ್ಗದ ಆದಿಯಾಗಿ ಹಾಡಿನ ಸಾಹಿತ್ಯ ಚರಿತ್ರೆಯೂ ಆರಂಭಗೊಳ್ಳುತ್ತದೆ. ಇದಕ್ಕೆ ಪೂರಕವಾಗಿ ಕವಿರಾಜ ಮಾರ್ಗದಲ್ಲಿ ಬಳಕೆಗೊಂಡ ಪದ್ಯಗಳನ್ನು ಉಲ್ಲೇಖಿಸುತ್ತಾರೆ. ಶೃಂಗಾರದಂತಹ ವಸ್ತುವನ್ನು ಹಾಡಲು ಬಳಕೆಗೊಳ್ಳುತ್ತಿದ್ದ ಚೆತ್ತಣ ಬೆದಂಡೆಗಳನ್ನು ಮುಂದೆ ಶಿವಶರಣಾದಿಯಾಗಿ ಅನೇಕ ಶಿವದಾಸರಲ್ಲಿ, ಭಕ್ತಿ, ಆಧ್ಯಾತ್ಮದಂತಹ ವಸ್ತುವನ್ನು ಕಟ್ಟಿ, ಹಾಡಲು ಬಳಸಿಕೊಳ್ಳಲಾಯಿತು ಎಂಬುದನ್ನು ಈ ಪೀಠಿಕಾ ಲೇಖನದಲ್ಲಿ ಅಭಿವ್ಯಕ್ತಿಸುತ್ತಾರೆ.

"ಎನ್ನ ಕಾಯಕ ದಂಡಿಗೆ ಮಾಡಯ್ಯ", "ದೇಶಾಕ್ಷಿಯಲ್ಲದ ರಾಗ" ಇಂತಹ ಪದ್ಯಗಳ ಉಲ್ಲೇಖ ಮಾಡುತ್ತಾ ಸಂಗೀತ ಸಾಹಿತ್ಯ ನೃತ್ಯಕ್ಕೆ ಶರಣ ಕೊಡುಗೆ ಏನು? ಎಂಬುದನ್ನು ಬಸವಣ್ಣ ಸಿದ್ಧರಾಮ ಅಕ್ಕಮಹಾದೇವಿಯಾಗಿ ಅನೇಕ ವಚನಕಾರರು ಸಾಹಿತ್ಯವನ್ನು ಹಾಡುವುದರ ಮೂಲಕ ಅವುಗಳನ್ನು ಸಂಗೀತಕ್ಕೆ ಸಂಯೋಜಿಸಿಕೊಂಡು ಹಾಡಲು ಆರಂಭಿಸಿದರೆಂದು, ವಚನಕಾರರ ವಚನ-ಹರಿದಾಸರ ಉಗಾಭೋಗಗಳು ಹೇಗೆ ಸಾಮ್ಯವನ್ನು ಪಡೆದಿವೆಂಬುದನ್ನು ಮೂರ್‍ನಾಲ್ಕು ಉದಾಹರಣೆಗಳನ್ನು ನೀಡುವುದರ ಮೂಲಕ ಶಿವದಾಸರು ಹರಿದಾಸರಿಗಿಂತ ಪೂರ್ವದಲ್ಲೇ ಸಂಗೀತ ಕ್ಷೇತ್ರಕ್ಕೆ ಕೊಡುಗೆ ನೀಡಿದ್ದರು ಎಂಬುದನ್ನು ಸಾಬೀತುಪಡಿಸಿದ್ದಾರೆ.

ಹಾಡುಗಳ ಪ್ರಕಾರ ಬೆಳೆದು ಬಂದ ಬಗೆಯನ್ನು ಸೂಚಿಸಲು ಹಾಡುಗಳ ಸಾಹಿತ್ಯ ಚರಿತ್ರೆಯ ಪ್ರಸ್ತಾವನೆಯಲ್ಲಿ ಶಿವದಾಸರಿಗಿಂತ ಪೂರ್ವದಲ್ಲೇ ಕಾಣುವ ಹಾಡಿನ ಪ್ರಕಾರವನ್ನು ಹಿಂದೆಯೇ ರಚಿಸಿರಬೇಕು ಆದರೆ ಆಧಾರಗಳಿಲ್ಲ. ಆದ್ದರಿಂದ ಅದರ ಆರಂಭವನ್ನು ವಚನಕಾರರ ಆದಿಯಾಗಿಯೇ ಆರಂಭಿಸುತ್ತಾರೆ. ಮುಂದೆ ಹರಿಹರ, ರಾಘವಾಂಕ, ನೂರೊಂದು ವಿರಕ್ತರಲ್ಲಿ ಬಹುವಾಗಿ ಬೆಳೆದು ಮುಂದೆ ಗುರುಪುರದ ಮಲ್ಲನ ಹಾಡುಗಳು ಜಕ್ಕಣ್ಣ ಮತ್ತು ಮಹಲಿಂಗನ ಏಕೋತ್ತರ ಶತಸ್ಥಲದಲ್ಲಿ ಹಾಡಿನ ಪ್ರಕಾರ ಕಂಡು ಬರುತ್ತದೆ. ನಂತರದಲ್ಲಿ ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿ ಜನಪ್ರಿಯವಾಗಿ ಬೆಳೆದ ಹಾಡುಗಳಿವು ಮುಪ್ಪಿನ ಷಡಕ್ಷರಿ, ಸರ್ಪಭೂಷಣ ಶಿವಯೋಗಿಗಳ ಮೂಲಕವಾಗಿ ಹತ್ತೊಂಬತ್ತನೆ ಶತಮಾನದವರೆಗೆ ಬೆಳೆದುಕೊಂಡು ಬಂದಿರುವಿಕೆಯನ್ನು ಉಲ್ಲೇಖಿಸುತ್ತಾರೆ.

ಶಿವನ ಮಹಿಮೆಯನ್ನು ಕೊಂಡಾಡುವ ಹಾಡುಗಳನ್ನು ರಚಿಸಿದ ವಾಗ್ಗೇಯಕಾರರ ವೃತ್ತಾಂತದಲ್ಲಿ ಶಿವದಾಸ ಗೀತಾಂಜಲಿಯಲ್ಲಿ ಬಳಕೆಗೊಂಡಿರುವ ಹಾಡುಗಳನ್ನು ರಚಿಸಿರುವ ಇಪ್ಪತ್ತೇಳು ಜನ ವಾಗ್ಗೇಯಕಾರರ ವೃತ್ತಾಂತವನ್ನು ಸಂಕ್ಷಿಪ್ತವಾಗಿ ಕಟ್ಟಿಕೊಡುತ್ತಾರೆ. ಅದರಲ್ಲಿ ಹದಿನಾರು ಜನ ಬಸವಣ್ಣನ ಸಮಕಾಲೀನರು, ನಂತರದ ಕಾಲಘಟ್ಟದ ನಿಜಗುಣ ಶಿವಯೋಗಿಗಳ ಕಾಲ ಆರುಜನ ವಾಗ್ಗೇಯಕಾರರ. ಜೀವನ ವೃತ್ತಾಂತ ಹಾಗೆಯೇ ನಿಜಲಿಂಗ ಚಿಕ್ಕಯ್ಯನ ಆದಿಯಾಗಿ ಕೆಲ ಶರಣರ ಜೀವನವನ್ನು ಓದುಗರಿಗೆ ಈ ಕೃತಿಯ ಸಂಪಾದನೆಯ ಮೂಲಕ ತಿಳಿಸಿದ್ದಾರೆ. ಇಲ್ಲಿ ಎಲ್. ಬಸವರಾಜು ಅವರು ಆಯಾ ಕಾಲಘಟ್ಟದ ಕೃತಿಯಲ್ಲಿ ಶರಣರ ಉಲ್ಲೇಖವನ್ನು ಗಮನಿಸುತ್ತಾ ಇತರ ಆಕರಗಳ ತಾಳೆ ನೋಡುತ್ತಾ ಶಿವದಾಸರ ಜೀವನ, ಕಾಲ, ಸ್ಥಳದ ವೃತ್ತಾಂತಗಳನ್ನು ತಿಳಿಸಿದ್ದಾರೆ. ಅದಕ್ಕೆ ಪೂರಕವಾದ ಅಡಿಟಿಪ್ಪಣಿಯನ್ನು ಆಯಾ ಪತ್ರದ ಕೆಳಗೆ ಕೊಡುತ್ತಾ ಹೋಗಿದ್ದಾರೆ.

ಒಟ್ಟಾರೆಯಾಗಿ ಶಿವದಾಸ ಗೀತಾಂಜಲಿಯಲ್ಲಿ ದೀರ್ಘವಾದ ಪ್ರಸ್ತಾವನೆಯ ಮೂಲಕ ಎಲ್. ಬಸವರಾಜು ಅವರು ವೀರಶೈವ ಧರ್ಮದ ಪ್ರಾಚೀನತೆ, ಬೆಳೆದುಬಂದು ಬಗೆ, ವಚನಸಾಹಿತ್ಯ ರಚನೆಗೊಂಡದದು, ಅದೇ ಕಾಲಕ್ಕೆ ಶರಣರಿಂದ ಹಾಡುಗಳ ರಚನೆ, ಹಾಡಿನ ಪರಂಪರೆ ಬೆಳೆದುಬಂದ ಬಗೆ, ಸಂಗೀತಕ್ಕೆ ಶಿವದಾಸ ಕೊಡುಗೆಯನ್ನು ದೀರ್ಘವಾಗಿ ವಿವರಿಸಿದ್ದಾರೆ.

ಸಮಾಜೋ-ಧಾರ್ಮಿಕ ಬದಲಾವಣೆಯ ದೃಷ್ಟಿಯಿಂದ ವಚನಗಳಂತೆಯೇ ಹಾಡುಗಳನ್ನು ರಚಿಸಿದ ಶಿವದಾಸರು, ನಿಯಮಗಳಿಗನುಸಾರವಾಗಿ ಹಾಡುಗಳನ್ನು ಕಟ್ಟಿದವರಲ್ಲ. ರಾಗ ಅಳವಟ್ಟು ಹಾಡಿದ ಗೇಯ ಕೃತಿಗಳಷ್ಟೇ. ಯಾವುದೇ ಛಂದೋನಿಯಮಗಳಿಗೆ ಒಳಪಟ್ಟು ರಚಿತವಾಗಿಲ್ಲ. ಅಂತಹ ಹಾಡುಗಳನ್ನು ವಿವಿಧ ವಿದ್ವಾಂಸರು ವಚನಕಾರರ ವಚನಗಳಲ್ಲಿ ಛಂದಸ್ಸಿನ ಹೊಳವುಗಳನ್ನು ಹುಡುಕುವಂತೆ ಎಲ್. ಬಸವರಾಜು ಅವರು ಶಿವದಾಸರ ಹಾಡುಗಳಲ್ಲಿ ವಿವಿಧ ಛಂದೋ ರೂಪಗಳನ್ನು ಹುಡುಕುವ ಪ್ರಯತ್ನ ಕೈಗೊಂಡಿರುವಿಕೆಯ ವಿಶೇಷ ಈ ಸಂಪಾದನೆಯಲ್ಲಿ ಕಂಡುಬರುತ್ತದೆ. ಸ್ವರವಚನಗಳಲ್ಲಿ ದೇಸಿ ಛಂದಸ್ಸಿನ ಮಟ್ಟುವಾದ ಅಂಕಗಣ ಛಂದಸ್ಸಿನ ನಿಯಮಗಳು ಅಧಿಕವಾಗಿ ಕಂಡುಬರುತ್ತವೆ. ಈ ಹಾಡುಗಳನ್ನು ಹಿಗ್ಗಿಸಲು ಅಥವಾ ಕುಗ್ಗಿಸಲು ಬರುವುದರಿಂದ ಅಂಶಗಣದ ಛಂದಸ್ಸುಗಳಾದ, ಏಳೆ, ತ್ರಿಪದಿ, ಸಾಂಗತ್ಯ, ಸೀಸ, ಪಿರಿಯಕ್ಕಾರ, ಷಟ್ಪದಿ, ದೊರೆಯಕಾರ, ಛಂದೋಪನಿಷತ್ತು, ಮದನವಲಿ, ಉತ್ಸಾಹದಂತ ಛಂದೋ ರೂಪಗಳನ್ನು ಗುರುತಿಸಿದ್ದಾರೆ. ನಿಯಮಾನುಸಾರ ಗಣಗಳು ಹೀಗೆ ಬರಬೇಕೆಂಬ ನಿಯಮಗಳೇನು ಇಲ್ಲ ಒಂದೊಂದು ಪದ್ಯದ ಗುಚ್ಛಗಳನ್ನು ಭಿನ್ನ ಭಿನ್ನ ಛಂದಸ್ಸಿನ ಲಕ್ಷಣಗಳು ಕಾಣಿಸಬಹುದೆಂಬುದನ್ನು ಸೂಕ್ತ ಉದಾಹರಣೆಯ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.

'ಶಿವದಾಸ ಗೀತಾಂಜಲಿ'ಯು ೨೪೦ಕ್ಕೂ ಅಧಿಕ ಶಿವದಾಸರ ಹಾಡುಗಳನ್ನು ಒಳಗೊಂಡ ಸಂಪಾದಿತ ಕೃತಿಯಾಗಿದ್ದು. ತಾವು ಬಳಸಿಕೊಂಡಿರುವ ಕೃತಿಯೊಳಗಿನ ಹಾಡುಗಳನ್ನು ಕ್ರಮಾನುಗತವಾಗಿ ಸಂಪಾದಿಸುತ್ತಾ ಹೊರಟಿದ್ದಾರೆ. ಮೊದಲ ೧೦೧ ಹಾಡುಗಳನ್ನು ಜಕ್ಕಣ್ಣನ ಏಕೋತ್ತರ ಶತಸ್ಥಲದಿಂದ, ೧೦೨ ರಿಂದ ೧೭೨ರ ವರೆಗಿನ ಹಾಡುಗಳನ್ನು ಶಿವಲಿಂಗದೇವನ ಶಿವಯೋಗ ಪ್ರದೀಪಿಕೆಯಿಂದ, ೧೭೩ ರಿಂದ ೧೭೭ವರೆಗಿನ ಹಾಡುಗಳನ್ನು ಗೂಳೂರು ಸಿದ್ಧವೀರನ ಶೂನ್ಯ ಸಂಪಾದನೆಯಿಂದ. ಸಿಂಗಿರಾಜನ ಪುರಾಣದಿಂದ ೧೮೦ನೆ ಹಾಡು, ೧೮೧ ರಿಂದ

೧೮೬ರ ವರೆಗಿರುವ ಹಾಡುಗಳನ್ನು ಚೆನ್ನ ಬಸವಣ್ಣನವರ ಸ್ಥಲಮಂತ್ರಗೋಪ್ಯದಿಂದ, ೧೮೭ನೇ ಹಾಡನ್ನು ಚೆನ್ನಬಸವಣ್ಣನವರ ಹಿರಿಯ ಮಂತ್ರ ಗೋಪ್ಯದಿಂದ, ೧೮೮ನೇ ಹಾಡನ್ನು ಅಲ್ಲಮ ಪ್ರಭುಗಳ ಪದಮಂತ್ರಗೋಪ್ಯದಿಂದ ಆಯ್ದುಕೊಂಡಿದ್ದಾರೆ. ಉಳಿದ ೫೨ ಗೀತೆಗಳನ್ನು ಜಕ್ಕಣ್ಣನ ಏಕೋತ್ತರ ಶತಸ್ಥಲ ಸೂತ್ರಗಳು, ಶಿವಲಿಂಗದೇವನ ಶಿವಯೋಗ ಪ್ರದೀಪಿಕೆಯ ಸ್ಥಲ ವಿಭಾಗ, ಕುಂಬಾರ ಶಾಂತ ಮಲ್ಲೇಶನ ಗಣವಚನ ರತ್ನಾವಳಿಯಿಂದ ಆಯ್ದುಕೊಂಡಿದ್ದಾರೆ. ಒಂದು ಓಲೆಗ್ರಂಥದಲ್ಲಿ ಉಲ್ಲೇಖಿಗೊಂಡ ಹಾಡು ಬೇರೊಂದು ಓಲೆಗರಿಯಲ್ಲಿ ಇದ್ದಿರಬಹುದಾದ ಸಾಧ್ಯತೆ ಇರುವುದರಿಂದ ಪ್ರತಿಪಾದಕ್ಕೂ ಎಲ್. ಬಸವರಾಜು ಅಡಿ ಟಿಪ್ಪಣಿಯಲ್ಲಿ ಪಾಠಾಂತರಗಳನ್ನು ನೀಡುತ್ತಾ ಬಂದಿದ್ದಾರೆ.

ತಾವು ಬಳಸಿಕೊಂಡಿರುವ ಓಲೆಗ್ರಂಥಗಳಿಗೆ 'ರಿ' 'ಜ' 'ಬ' 'ಪ' ಮುಂತಾದ ಹೆಸರುಗಳನ್ನು ನೀಡಿದಂತೆ, ತಾವು ಪ್ರಸ್ತಾವನೆಯ ಭಾಗಕ್ಕೆ ಬಳಸಿಕೊಂಡಿರುವ ಗ್ರಂಥಗಳನ್ನು ಸಂಕೇತ ರೂಪದಲ್ಲಿ ಹೇಳಲಾಗಿದ್ದು. ಪ್ರಸ್ತಾವನೆಯ ಕೊನೆಗೆ ಸಂಕೇತಗಳನ್ನು ವಿವರಿಸಿದ್ದಾರೆ.

ಉದಾ: 'ಶಿ.ತ.ಚಿ.' ಶಿವತತ್ತ್ವ ಚಿಂತಾಮಣಿ, ಗು.ರು.ಚಾ. ಗುರುರಾಜ ಚಾರಿತ್ರ ಹೀಗೆ ಅದರಂತೆ ಗ್ರಂಥ ಭಾಗದ ಅಡಿಟಿಪ್ಪಣಿಗಳಲ್ಲಿ ಬಳಸಿರುವ ಸಂಕೇತಗಳ ವಿವರವನ್ನು ಸಹ ಸೂಚಿಸಿದ್ದಾರೆ.

"x = ಇಲ್ಲ (ಗದ್ಯಾ), + ಈ ಚಿಹ್ನೆ ಮುಂದಿರುವಷ್ಟು ಭಾಗವು ಮುಂದೆ ಸೂಚಿಸಿರುವ ಪ್ರತಿಗಳಲ್ಲಿ ಅಧಿಕವಾಗಿದೆಯೆಂದು [ ] ಈ ಆವರಣವಿದ್ದರೆ ಅದು ಸಂಪಾದಕದ ಕಲ್ಪಿತವಾದರೆಂದು ಮುಂತಾದವು."[೪] ಗ್ರಂಥಭಾಗದಲ್ಲಿ ನೀಡಿರುವ ಹಾಡು ನಡುವೆ ಬಳಸಿರುವ ಚಿಹ್ನೆಗಳು ಹಾಡುಗಳನ್ನು ಯಾವ ರೀತಿ ಗ್ರಹಿಸಬೇಕೆಂಬುದನ್ನು, ಓದಲೇಬೇಕೆನ್ನುವುದನ್ನು ತಿಳಿಯಪಡಿಸುತ್ತವೆ. ಈ ಚಿಹ್ನೆಯಿಂದ ಕೂಡಿದಲ್ಲಿ ಹಿಂದಣ ಪದವು ವಿಭಕ್ತಿ ಪ್ರತ್ಯಯಯದಲ್ಲಿದೆಯೆಂದು ಈ ಚಿಹ್ನೆಯು ಹಿಂದಣ ಅಕ್ಷರದ ಮೇಲಣ ಸ್ವರವನ್ನು ಬಿಡಿಸಿ ಮುಂದಣ ಪದಕ್ಕೆ ಸೇರಿಸಿ ಓದಿಕೊಳ್ಳಬೇಕೆನ್ನುವುದನ್ನು ತಿಳಿಸುತ್ತವೆ.

"ಮರುತಂ ಗೂಡಿದ ಪರಿಮಳದಂತೆ
ಉರಿಯುಂಡ ಕರ್ಪೂರ ಕರಿದೋಟಿದಂತೆ,
ಸರವು ಬಿಂದು 'ಸುಸರವಾಗಿ', ಎ-
ನ್ನಿರವು ಲಿಂಗದೊಳಗೆ ಲೀಯವಾಗಿ"[೫] (ಶೀ.ಗಿ. ಪು.೧೯೧)

ಚೆನ್ನಬಸವಣ್ಣನವರ ಈ ಹಾಡಿನ ಗುಚ್ಛದಲ್ಲಿ ॥ ಚಿಹ್ನೆ ಬಳಕೆಗೊಂಡಿದ್ದು ಇದು ಮುಖ್ಯ ತಿಳಿಯಪಡಿಸುವುದು. ಈ ಚಿಹ್ನೆಯ ಹಿಂದಣ ಪದವಾದ ಕರ್ಪೂರವು ವಿಭಕ್ತಿ ಪ್ರತ್ಯಯದಿಂದ ಕೂಡಿದೆಯೆಂಬುದನ್ನು ತಿಳಿಸುತ್ತಿದೆ. ಅದರಂತೆ '೧' ಮತ್ತು '೨' ಸಂಖ್ಯೆಗಳಿಂದ ಕೂಡಿದ ಸಂಕೇತಗಳನ್ನು ಬಿಳಿಸಿದ್ದಾರೆ.

'ಸುಸರವಾಗಿ' ಎನ್ನುವ ಶಬ್ದವು ಜಕ್ಕಣ್ಣನ ಏಕೋತ್ತರ ಶತಸ್ಥಲದ 'ಕ' ಪ್ರತಿಯಲ್ಲಿ ಹೀಗೆಯೇ ಇದ್ದು. ಜಕ್ಕಣ್ಣನ ಏಕೋತ್ತರ ಶತಸ್ಥಲದ 'ಮ' ಪ್ರತಿಯಲ್ಲಿ 'ವಿನೋಳು ಸೂಸರವಾಗಿ' ಎಂದಿದೆ. ಅದರಂತೆ ಲೀಯವಾಗಿ'

ಎನ್ನುವ ಶಬ್ದವು ಜಕ್ಕಣ್ಣನ ಏಕೋತ್ತರ ಶತಸ್ಥಲ ಙ ಪ್ರತಿಯಲ್ಲಿ ಲಿಂಗೈಕ್ಯವಾಗಿ ಎಂದಿದೆ. ಇಲ್ಲಿ ಶಿವಭಕ್ತ ಲಿಂಗದಲ್ಲಿ ಐಕ್ಯವಾಗುವಿಕೆಯನ್ನು ತಿಳಿಯಪಡಿಸುವಿಕೆಯಿಂದೊಡಗೂಡಿದ ಈ ಹಾಡಿನ ಗುಚ್ಛದಲ್ಲಿ ಅರ್ಥಾನುಸಾರಿಯಾಗಿ ಅಡಿಟಿಪ್ಪಣಿಯಲ್ಲಿ ಸೂಚಿಸಿದ ವಿವಿಧ ಪ್ರತಿಗಳ ಶಬ್ದಗಳನ್ನು ಸೂಚಿಸಿದ್ದಾರೆ. ಪ್ರತಿಪಾಠಗಳಿಗೆ ಪಾಠಾಂತರಗಳನ್ನು ಗುರುತಿಸುವಲ್ಲಿ ಊಹೆಗೆ ಹೆಚ್ಚಿನ ಒತ್ತು ಕೊಡದೆ ಎಲ್ಲವನ್ನು ಸೂಕ್ಷ್ಮವಾಗಿ ಪರಿಶೀಲಿಸಿಯೇ ಪಾಠಾಂತರಗಳನ್ನು ಗುರುತಿಸುವಲ್ಲಿ ಊಹೆಗೆ ಹೆಚ್ಚಿನ ಒತ್ತು ಕೊಡುದೆ ಎಲ್ಲವನ್ನು ಸೂಕ್ಷ್ಮವಾಗಿ ಪರಿಶೀಲಿಸಿಯೇ ಪಾಠಾಂತರಗಳನ್ನು ಕೊಡುತ್ತಾ ಹೋಗುತ್ತಾರೆ.

ಎಲ್. ಬಸವರಾಜು ಅವರ ಸಂಪಾದನೆಯ ಮತ್ತೊಂದು ವೈಶಿಷ್ಟ್ಯವೆಂದರೆ ಪ್ರತಿ ಹಾಡಿನ ಪಾಠವನ್ನು ಇತರೆ ಪ್ರತಿಗಳಲ್ಲಿನ ಅದೇ ಹಾಡಿನ ಪಾಠವನ್ನು ತುಲನಾತ್ಮಕವಾಗಿ ಅಧ್ಯಯನಮಾಡಿ ಕೊನೆಗೊಂದು ಶುದ್ಧ ಪಾಠವನ್ನು ನೀಡುವುದು. ಹಾಗೆಯೇ ಅದೇ ಪಾಠಕ್ಕೆ ಸಂಬಂಧಿಸಿದ ವ್ಯತ್ಯಾಸದಿಂದ ಕೂಡಿದ ಶಬ್ದಗಳ ಪಾಠ ಇತರೆ ಪಾಠಗಳನ್ನು ಅಡಿ ಟಿಪ್ಪಣಿಯಲ್ಲಿ ನೀಡುತ್ತಾ ಹೋಗುವುದು ಇದರಿಂದ ಅಧ್ಯಯನಕಾರನಿಗೆ ಯಾವುದೇ ಗೊಂದಲ, ಸಮಸ್ಯೆಯುಂಟಾಗದೆ ಸುಲಭವಾಗಿ ಪಾಠಗ್ರಹಿಸಲು ಸಾಧ್ಯವಾಗುತ್ತದೆ.

ಜಕ್ಕಣ್ಣ ಮತ್ತು ಮಹಲಿಂಗ ಶರಣರು ತಮ್ಮದೇ 'ಏಕೋತ್ತರ ಶತಸ್ಥಲ'ದಲ್ಲಿ ಪ್ರತಿಯೊಂದು ಸ್ಥಲಗಳಿಗೊಂದರಂತೆ ಹಾಡು ಅಥವಾ ವಚನಗಳನ್ನು ಸೇರಿಸುತ್ತಾ ಸ್ಥಲ ಮಹಾತ್ಮೆಯನ್ನು ವರ್ಣಿಸುತ್ತಾರೆ. ಅಂತಹ ಸ್ಥಲಗಳ ಬಗ್ಗೆ ನೂರಾರು ಹಾಡು ಅಥವಾ ವಚನಗಳು ಲಭ್ಯವಿದ್ದು, ಸ್ಥಲಗಳ ಬಗ್ಗೆ ವಿವರ ಅಷ್ಟೊಂದು ತಿಳಿದು ಬರಲಿಕ್ಕಿಲ್ಲ. ಆದ್ದರಿಂದ ಎಲ್. ಬಸವರಾಜು ಅವರು ಈ ಸಂಪಾದನೆಯ ಪ್ರತಿಯೊಂದು ಸ್ಥಲಗಳ ಬಗ್ಗೆ ಮಾಹಿತಿಯನ್ನು ಕೊಡುತ್ತಾ ಹೋಗುತ್ತಾರೆ. ಜೊತೆಗೆ ಆಯಾ ಸ್ಥಲಗಳನ್ನು ನಿರ್ದೇಶಿಸುವ ಹಾಡುಗಳ ಸಂಖ್ಯೆಯನ್ನು ಶಿವದಾಸ ಗೀತಾಂಜಲಿಯನ್ನು ಆಧಾರವಾಗಿಟ್ಟುಕೊಂಡು ಹಾಡಿನ ಸಂಖ್ಯೆಯನ್ನು ಕೊಡುತ್ತಾ ಹೋಗಿದ್ದಾರೆ.

ಕೃತಿಯ ಅನುಬಂಧದ ಭಾಗದಲ್ಲಿ ಶ್ರೀಮಂತರು, ಸ್ವರವಚನಗಳ ಪಲ್ಲವಿಗಳನ್ನು, ಅಕಾರಾದಿಯಾಗಿ ಜೋಡಿಸಿಕೊಟ್ಟಿದ್ದಾರೆ. ಜೊತೆಗೆ ಪಲ್ಲವಿಗಳ ಅಕಾರಾದಿಯ ಮುಂದೆ ಸ್ವರವಚನದ ಸಂಖ್ಯೆಯನ್ನು ಸಹ ಕೊಡಲಾಗಿದೆ. ಇದರಿಂದ ಸ್ವರವಚನಗಳ ಅಂಕಿತವನ್ನು ಹಿಡಿದು ನೇರವಾಗಿ ಕೃತಿಯನ್ನು ಪ್ರವೇಶ ಮಾಡಬಹುದು. ಅಲ್ಲದೆ ೨೪೦ಕ್ಕೂ ಅಧಿಕ ಹಾಡುಗಳನ್ನು ಒಳಗೊಂಡ ಈ ಕೃತಿಯಲ್ಲಿ ಪಲ್ಲವಿಗಳ ಅಕಾರಾದಿಯೂ ಸೂಕ್ತವಾದ ಪ್ರದೇಶಿಕೆಯನ್ನು ದೊರಕಿಸಿಕೊಡುತ್ತದೆ. ಉದಾ:

"ಅಂಬರ - ಚಪ್ಪರದಡಿಯಲಿ ಘನ
ಕುಂಭಿನಿಯನೆ ಹಸೆಯ ಹಾಸಿ
ಇಂಬಪ್ಪ ಜೀವಾದಿ ಕರಣ-ನಿಬ್ಬಣಿಗರು
ಸಂಭ್ರಮ ಸಂಭ್ರಮಿಸಿದರು ನೋಡಿ" || ಪ ||        || ೨೦೩ ||

ಪಲ್ಲವಿಯ ಆದಿಯಾಗಿ ಹಾಡಿನ ಗುಚ್ಛದ ಸಂಖ್ಯೆಯನ್ನು ನೋಡಿದಾಗ ನೇರವಾಗಿ "ನಿರ್ವಾಣಿ ಜೋಳೇಶನ ಹಾಡಿಗೆ ಪ್ರವೇಶ ಪಡೆಯಬಹುದಾಗಿದೆ. ಪಲ್ಲವಿಗಳ ಅಕಾರಾದಿಯ ಮೂಲಕ ಯಾವುದೇ ಹಾಡಿನ ಸಂಖ್ಯೆ ಮತ್ತು

ಹಾಡಿನ ಕರ್ತೃವಿಗೆ ನೇರವಾಗಿ ಪ್ರವೇಶ ಪಡೆಯಬಹುದಾಗಿದೆ. ಎಲ್. ಬಸವರಾಜು ಅವರು ನೀಡಿರುವ ಎಲ್ಲಾ ಹಾಡುಗಳ ಅಕಾರಾದಿಯನ್ನು ಗಮನಿಸಿದಾಗ ಸಂಪಾದನಾ ವಿಧಾನದಲ್ಲಿ ಅವರಿಗೆ ಇರುವ ತಾಳ್ಮೆ ಶ್ರದ್ಧೆ ಎಷ್ಟೆಂಬುದು ಕಂಡುಬರುತ್ತದೆ. ವೀರಣ್ಣ ರಾಜೂರು ಶಿವಯೋಗ ಪ್ರದೀಪಿಕೆಯನ್ನು ಸಂಪಾದಿಸಿದ್ದಾರೆಯಾದರೂ ಬಸವರಾಜು ಅವರ ಸಂಪಾದನಾ ವಿಧಾನ ಅವರಲ್ಲಿ ಕಂಡುಬರುವುದಿಲ್ಲ. ಪ್ರಸ್ತಾವನೆಯ ವಿಧಾನದಿಂದಲೂ ಬಸವರಾಜು ಅವರ ಆಳವಾದ ಅಧ್ಯಯನ ರಾಜೂರರಲ್ಲಿ ಕಂಡುಬರುವುದಿಲ್ಲ. ಪಾಠಾಂತರಗಳನ್ನು ಗುರುತಿಸುವಲ್ಲಿ ಬಸವರಾಜು ಅವರ ಜಾಣ್ಮೆ ಅಗಾಧವಾದುದು. ಯಾವುದನ್ನೇಯಾದರೂ ನೇರವಾಗಿ ಒಪ್ಪುವುದಿಲ್ಲ. ಹಾಗೆಯೇ ನಿರಾಕರಿಸುವುದಿಲ್ಲ. ಸೂಕ್ತವೆನಿಸಿದ ಪಾಠವನ್ನು ನೀಡಿ ಉಳಿದ ಅದರದೇ ಪಾಠವನ್ನು ಅಡಿಯಲ್ಲಿ ನೀಡುತ್ತಾರೆ.

ಹಾಡುಗಳ ಅಧ್ಯಯನದ ದೃಷ್ಟಿಯಿಂದ ಅಕಾರಾದಿ ಪಲ್ಲವಿಗಳನ್ನು ನೀಡಿ, ಆ ಹಾಡುಗಳ ಕರ್ತೃವಿನ ಅಂಕಿತದ ಜೊತೆಗೆ ರಾಗವನ್ನು ಹಾಗೂ ಹಾಡಿನ ಸಂಖ್ಯೆಯನ್ನು ನೀಡಿದ್ದಾರೆ. ಇಲ್ಲಿ ಪಲ್ಲವಿಯ ಜೊತೆಗೆ ಹಾಡಿನ ಕರ್ತೃವಿನ ಅಂಕಿತವನ್ನು ಅದು ಒಳಗೊಂಡಿರುವ ರಾಗವನ್ನು ತಿಳಿಯಬಹುದಾಗಿದೆ. "ಶರಣನೇ ಭಕ್ತ-ಪಲ್ಲವಿ, ಹಾಡಿನ ಸಂಖ್ಯೆ-೨೦೯, ಅಂಕಿತ-ಗುಹೇಶ್ವರ ಲಿಂಗ, ರಾಗ ಸನ್ಯಾಸಿ" ಹೀಗೆ ಈ ಕೃತಿ ಸಂಪಾದನೆಯ ವೈಶಿಷ್ಟ್ಯಪೂರ್ಣವಾಗಿ ಇತರ ಸಂಪಾದಿತ ಕೃತಿಗಳಿಗಿಂತ ಭಿನ್ನವಾಗಿ ಕಂಡುಬರುತ್ತದೆ.

ಗಮನಾರ್ಹ ಪದಸೂಚಿಯಲ್ಲಿ ಯಾವ ಶಬ್ದವು ಹಾಡಿನ ಯಾವ ಗುಚ್ಛದಲ್ಲಿ ಬಳಕೆಗೊಂಡಿದೆ ಎಂಬುದನು. ಅಪಾರ ಪಾಂಡಿತ್ಯದಿಂದ ಸೂಚಿಸಿದ್ದಾರೆ. ಇಲ್ಲಿಯೂ ಶಬ್ದಗಳ ಅಕಾರಾದಿಯು ಇದ್ದು ಅಕಾರಾದಿ ಶಬ್ದಗಳು ಬಳಕೆಗೊಂಡ ಅನೇಕ ಶಬ್ದಗಳನ್ನು ಹಾಡಿನ ಗುಚ್ಛದ ಸಂಖ್ಯೆಯ ಸೂಚಿಸುವುದರ ಮೂಲಕ ಎಲ್ಲಿಯೂ ಸಂದಿಗ್ಧತೆಯುಂಟಾಗದಂತೆ ಜೋಡಿಸಿಕೊಂಡು ಹೊರಟಿದ್ದಾರೆ. ಈ ರೀತಿ ಪದಗಳ ಪಟ್ಟಿಯ ಮುಂದೆ ಸಂಖ್ಯೆಯನ್ನು ನೀಡುವುದು ಸಾಮಾನ್ಯ ಕೆಲಸವಲ್ಲ. ಅದಕ್ಕೆ ಅಪಾರವಾದ ಜ್ಞಾನ. ಪ್ರತಿಭೆ, ಶ್ರದ್ಧೆ, ತಾಳ್ಮೆ ಎಲ್ಲವು ಬೇಕು. ಅವೆಲ್ಲವು ಬಸವರಾಜು ಅವರಲ್ಲಿ ಮೇಳೈಸಿವೆ.

ಈ ಕೃತಿಯ ಸಂಪಾದನೆಯಲ್ಲಿ ಬಳಕೆಗೊಂಡ ರಾಗ ತಾಳಗಳ ಪಟ್ಟಿ ಮಾಡಿ ಅಕಾರಾದಿಯಾಗಿ ಜೋಡಿಸಿ ಅವುಗಳ ರಾಗಗಳ ಲಕ್ಷಣಗಳನ್ನು ಸಂಯೋಜಿಸಿದ್ದಾರೆ. ಇಲ್ಲಿ ಬಸವರಾಜು ಅವರು ಸಂಪಾದನೆಯ ದೃಷ್ಟಿಯಿಂದ ರಾಗ ಲಕ್ಷಣಗಳು ತಮಗೆ ತಿಳಿಯದೇ ಇದ್ದುದರಿಂದ ಅವುಗಳ ಲಕ್ಷಣಗಳನ್ನು ಸಂಗೀತ ವಿದ್ವಾನ್ ವೀಣಾ, ವಿದ್ವಾನ್ ಶ್ರೀ ಎಂ. ಚೆಲುವರಾಯಸ್ವಾಮಿ ಅವರಲ್ಲಿ ಬರೆಸಿಕೊಂಡಿದ್ದಾರೆ. ಆಯಾ ರಾಗಗಳ ಆರೋಹಣ ಅವರೋಹಣ ಲಕ್ಷಣಗಳನ್ನು ಸೂಚಿಸಿದ್ದಾರೆ.

"ಉದಾ: ಗುಂಡಕ್ರಿಯ ರಾಗ ಲಕ್ಷಣವನ್ನು ಹೀಗೆ ತಿಳಿಸುತ್ತಾರೆ.

ಆರೋಹಣ - ಸರಿಮಪನಿಸ

೧೧ ೩

ಅವರೋಹಣ - ಸನಿ ಪದ ಪಮ ಗರಿಸ

೩ ೧ ೧ ೩ ೧"

ಕೃತಿಯ ಕೊನೆಗೆ ಸಂಪಾದಿತವಾದ ಎಲ್ಲ ಹಾಡಿನ ನುಡಿಗಳ ವ್ಯಾಖ್ಯಾನವು ಕಂಡುಬರುತ್ತದೆ. ಸಾವಿರದ ಹತ್ತು ನುಡಿಗಳಿಗೆ ವ್ಯಾಖ್ಯಾನವನ್ನು ಅಪಾರವಾದ ವಿದ್ವತ್, ಪರಿಶ್ರಮದಿಂದ ನೀಡಿದ್ದಾರೆ. ಹಾಡುಗಳು ಆಧ್ಯಾತ್ಮದಂತಹ ಗಹನವಾದ ವಿಷಯವನ್ನು ಒಳಗೊಂಡಿದ್ದ ಸಂದರ್ಭದಲ್ಲಿ ಗ್ರಹಿಸುವಿಕೆಯೂ ಕಷ್ಟಕರವಾಗುತ್ತದೆ. ಅಂತಹ ಸಂದಿಗ್ಧತೆಯುಂಟಾಗದಂತೆ ಇರಲು ಪ್ರತಿನುಡಿಗಳಿಗೆ ವ್ಯಾಖ್ಯಾನವನ್ನು ನೀಡಿದ್ದಾರೆ. ಕೊನೆಗೆ ಪದಕೋಶದಲ್ಲಿ ಅಕಾರಾದಿಯಾಗಿ ಅರ್ಥಗಳನ್ನ ಕೊಡಲಾಗಿದೆ. ಅದರ ಜೊತೆಗೆ ಆ ಪದ ಬಳಕೆಯ ನುಡಿಯ ಸಂಖ್ಯೆಯನ್ನು ಆಯಾ ಶಬ್ದದ ಮುಂದೆ ನೀಡಲಾಗಿದೆ. ಹಾಡಿನ ಓದಿನ ಸಂದರ್ಭದಲ್ಲಿ ಪದಗಳಿಗೆ ಅರ್ಥ ಗೊತ್ತಾಗದೆ ಇದ್ದ ಸಂದರ್ಭದಲ್ಲಿ ಅಕಾರಾದಿಯಾಗಿ ನೇರವಾಗಿ ಪದಕೋಶ ಪ್ರವೇಶಪಡೆದು ಅರ್ಥವನ್ನು ತಿಳಿಯಬಹುದಾಗಿದೆ. ಎಲ್. ಬಸವರಾಜು ಅವರ 'ಶಿವದಾಸ ಗೀತಾಂಜಲಿ' ಕೃತಿಯು ಶಿವಶರಣರ ಹಾಡುಗಳ ಸಂಕಲನದಿಂದೊಡಗೂಡಿದ ಸಂಪಾದಿತ ಕೃತಿ ಆಧುನಿಕ ವಿಧಾನಗಳನ್ನು ಅನುಸರಿಸಿ ಸಂಕಲನ ಮಾಡಿ ಸಂಪಾದಿಸಿದ್ದಾರೆ. ಸಂಕಲನ ದೃಷ್ಟಿಯಿಂದ ಆಧುನಿಕ ಕಾಲದ ಸಂಕಲನ ಗ್ರಂಥ. ಆದರೆ ಸ್ವರ ವಚನಗಳ ಸಂಕಲನ ಪರಂಪರೆಯೂ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ.

- ಸ್ವರವಚನ ಸಂಕಲನ ಪ್ರಕಾರಕ್ಕೆ ಸಂಬಂಧಿಸಿದ ಮೊದಲ ಕೃತಿ ೧೪೨೫ ಎಂಬ ಹೆಗ್ಗಳಿಕೆಯು ಮಹಾ ಲಿಂಗದೇವ ಮತ್ತು ಜಕ್ಕಣ್ಣನ 'ಏಕೋತ್ತರ ಶತಸ್ಥಲ'ಕ್ಕೆ ಸಲ್ಲುತ್ತದೆ. ವಚನ ಮತ್ತು ಹಾಡು ಇವೆರಡರ ಜೋಡಣೆಯಿಂದಲೇ ನಿರೂಪಿತವಾದುದು ಮಹಾಲಿಂಗನ ಏಕೋತ್ತರ ಶತಸ್ಥಲ, ಕೇವಲ ಹಾಡುಗಳ ಜೋಡಣೆಯಿಂದ ಕೂಡಿರುವುದು ಸಂಗ್ರಹಿಸಿದ ಹಾಡನ್ನು ಒಂದೊಂದು ಸ್ಥಲಕ್ಕೆ ಮೀಸಲಿಟ್ಟು, ಆ ಸ್ಥಲದ ವಿವರಣೆಗೆ ಒಂದೊಂದು ಸೂತ್ರ ರೂಪದ ಹಾಡನ್ನು ನೀಡಿದ್ದಾನೆ. ಜಕ್ಕಣ್ಣನ ಏಕೋತ್ತರ ಶತಸ್ಥಲದ ನಂತರ ಸಿಕ್ಕುವುದೇ ಮಹಾಲಿಂಗನದು. ಜಕ್ಕಣ್ಣನಿಗೆ ಏಕೋತ್ತರ ಶತಸ್ಥಲಕ್ಕೆ ತಂತ್ರವನ್ನು ಒದಗಿಸಿದವನೇ ಇವನಾಗಿದ್ದಾನೆ. ಪ್ರತಿ ಸ್ಥಲಗಳಿಗೆ ಒಂದೊಂದು ಹಾಡನ್ನು ನೀಡುವುದರ ಜೊತೆಗೆ ವಚನವನ್ನು ನೀಡಿದ್ದಾನೆ. ಜಕ್ಕಣ್ಣನಲ್ಲಿ ವಚನಗಳಿಲ್ಲ. ಮೂರನೇ ವಿಧಾನದಲ್ಲಿ ಕಂಡುಬರುವ ಮತ್ತೊಂದು ಸಂಕಲನ ಗ್ರಂಥ ಸಿದ್ಧಲಿಂಗನ ಏಕೋತ್ತರ ಶತಸ್ಥಲ. ಇದು ಮಹಾಲಿಂಗದೇವ ಹಾಗೂ ಜಕ್ಕಣ್ಣನ ಏಕೋತ್ತರ ಶತಸ್ಥಲದ ಕ್ರಮಣಿಕೆಯಲ್ಲಿ ರಚಿತವಾಗಿದೆ.
- 'ಗಣವಚನ ರತ್ನಾವಳಿ' ಕಂಬಾರ ಶಾಂತ ಮಲ್ಲೇಶನನಿಂದ ರಚಿತವಾಗಿದೆ. ಈ ಕೃತಿಯು ಬಸವಾದಿ ಪ್ರಮಥರ ಹಾಡುಗಳನ್ನು ಒಳಗೊಂಡಿದೆ. ಏಕೋತ್ತರ ಶತಸ್ಥಲದಂತೆ ಅದರ ಪರಿಧಿಯಲ್ಲಿ ಈ ಕೃತಿಯ ಹಾಡುಗಳು ರಚಿತವಾಗಿವೆ. ೬೪ ಶಿವಶರಣರ ೨೧೬ ಸ್ವರವಚನಗಳು.
- 'ಶಿವಯೋಗ ಪ್ರದೀಪಿಕೆ' ಶಿವಲಿಂಗ ದೇವನಿಂದ ರಚಿತವಾದ ಈ ಕೃತಿಯಲ್ಲಿ ೨೧ ಸ್ಥಲಗಳಿದ್ದು ಆ ಸ್ಥಲಗಳಿಗೆ ಅನುಗುಣವಾಗಿ ೨೪ ಶಿವಶರಣ ಶರಣೆಯರ ೨೩ ಸ್ವರವಚನಗಳಿದ್ದು ರಾಗ ಸಮೇತ ಉಲ್ಲೇಖಗಳನ್ನು ಒಳಗೊಂಡ ಸಂಕಲನ ಕೃತಿಯಾಗಿದೆ. ಗಣವಚನ ರತ್ನಾವಳಿಯಲ್ಲಿನ ಅನೇಕ ಹಾಡುಗಳು 'ಶಿವಯೋಗ ಪ್ರದೀಪಿಕೆ'ಯಲ್ಲೂ ಕಂಡುಬರುತ್ತವೆ.

- 'ಶೂನ್ಯ ಸಂಪಾದನೆಗಳು' ಇವು ಶಿವಗಣ ಪ್ರಸಾದಿ ಮಹಾದೇವಯ್ಯ, ಹಲಗೆದೇವ, ಗುಮ್ಮಾಳಪುರದ ಸಿದ್ಧಲಿಂಗ, ಗೊಳೂರು ಸಿದ್ಧವೀರಣ್ಣ ಒಡೆಯರು. ಇವರಿಂದ ರಚಿತವಾಗಿವೆ. ಶಿವರಣರ ಬದುಕನ್ನು ಅವರ ವಚನ, ಹಾಡುಗಳ ಮೂಲಕ ನಾಟಕೀಯವಾಗಿ ಹೆಣೆದಿದ್ದಾರೆ. ಇಲ್ಲಿ ಹಾಡುಗಳನ್ನು ವಚನಗಳೆಂದೇ ವಿವರಿಸಲಾಗಿದೆ. ಗೂಳೂರು ಸಿದ್ಧವೀರನ ಶೂನ್ಯ ಸಂಪಾದನೆಯು ಏಕೋತ್ತರ ಶತಸ್ಥಲದಲ್ಲಿನ ಹದಿಮೂರು ಹಾಡುಗಳನ್ನು ಅದರ ಜೊತೆಗೆ ಇತರ ಹಾಡುಗಳನ್ನು ಒಳಗೊಂಡಿದೆ.
- 'ಸಿಂಗಿರಾಜ ಪುರಾಣ' ಇದು ಅನೇಕ ಶಿವಶರಣರ ಹಾಡುಗಳನ್ನು ಒಳಗೊಂಡ ಕೃತಿ.
- ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿ, ಇದು ಸ್ವರ ವಚನಗಳಿಂದ ಕೂಡಿದ ಕೃತಿ. ಭಾವ ಭಾಷೆ ಮತ್ತು ಸಂಗೀತ ಎಲ್ಲ ದೃಷ್ಟಿಯಿಂದಲೂ ಸಂಪೂರ್ಣವಾದ ಸ್ವರವಚನಗಳಿಂದೊಡಗೂಡಿದ ಕೃತಿಯಾಗಿದೆ. ಇಂದಿಗೂ ಈ ಕೃತಿಯ ಪ್ರತಿಗಳು ಹಳ್ಳಿಗಳಲ್ಲಿ ಅತೀ ಹೆಚ್ಚು ಪ್ರಮಾಣದಲ್ಲಿ ಲಭ್ಯವಿದ್ದು. ಗ್ರಾಮಾಂತರ ಪ್ರದೇಶಗಳ ಭಜನೆ ಮೇಳಗಳಲ್ಲಿ ಇದರಲ್ಲಿನ ಹಾಡುಗಳನ್ನು ಹಾಡುತ್ತ ಪರಂಪರೆಯೂ ಇನ್ನೂ ಇದೆ. ಇದು ೧೨೪ ಹಾಡುಗಳಿಂದ ಕೂಡಿದೆ.
- ಸರ್ಪಭೂಷಣ ಶಿವಯೋಗಿಗಳ ಕೈವಲ್ಯ ಕಲ್ಪವಲ್ಲರ ಇದು. 'ಕೈವಲ್ಯ ಪದ್ಧತಿ'ಯ ಕ್ರಮದಲ್ಲಿಯೇ ರಚಿತಗೊಂಡಿದ್ದು. ಐದು ಸ್ಥಲಗಳಿಂದೊಡಗೂಡಿ ಗುರುಸಿದ್ಧ ಮುದ್ರಿಕೆಯ ಹಾಡುಗಳಿಂದ ಕೂಡಿಕೊಂಡಿದೆ.
- ಮುಪ್ಪಿನ ಷಡಕ್ಷರಿಯ ಕೈವಲ್ಯ ಪದಗಳು ಶಿವ ಷಡಕ್ಷರಿ ಲಿಂಗ ಅಂಕಿತದಿಂದ ಕೂಡಿದ ಈತನ ಸ್ವರವಚನಗಳು ನಿಜಗುಣರ ಕೈವಲ್ಯ ಪದ್ಧತಿಯ ಹಾಡುಗಳ ವಿಷಯ ನಿರೂಪಣೆಯ ಮಾದರಿಯನ್ನು ಅನುಸರಿಸಿವೆ. ಹಾಗೆಯೇ ಸುಬೋಧಸಾರ ಅನುಭಾವ ಪದಗಳಿಂದ ಕೂಡಿದ ಸಂಕಲನ ಕೃತಿಯಾಗಿದೆ.
- ಮೈಲಾರ ಬಸವಲಿಂಗ ಶರಣರ ಶಿವಾನುಭವ ದರ್ಪಣ. ಈ ಕೃತಿಯೂ ವೀರಶೈವ ಸಿದ್ಧಾಂತ ನಿರೂಪಣೆಯ ಜೊತೆಗೆ ಸಾಮಾಜಿಕ ಮೌಢ್ಯಾಚರಣೆಯಂತಹ ವಸ್ತುವನ್ನು ಒಳಗೊಂಡ ಹಾಡುಗಳ ಸಂಕಲನ ಕೃತಿಯಾಗಿದೆ.
- ಹೀಗೆ ಮಧ್ಯಕಾಲೀನೋತ್ತರದಲ್ಲಿ ಬಂದ ಅನೇಕ ಸ್ವರವಚನಕಾರರು ಹಾಡುಗಳನ್ನು ಒಳಗೊಂಡ ಕೃತಿಯನ್ನು ರಚಿಸಿದ್ದಾರೆ. ಇವೆಲ್ಲ ಗೀತೆಗಳನ್ನು ಒಳಗೊಂಡ ಕೃತಿಗಳಾಗಿದ್ದು ಅವುಗಳಲ್ಲಿ ಕೆಲ ಸಂಕಲನ ಕೃತಿಗಳಾದರೆ ನಿಜಗುಣರಾದಿ ಶರಣರ ಕೃತಿಗಳು ಸ್ವರವಚನಗಳಾಗಿವೆ. ಇವರ ತರುವಾಯ ಅನೇಕ ಹಾಡುಗಳನ್ನು ಒಳಗೊಂಡ ಕೃತಿಗಳು ರಚಿತವಾಗಿವೆ.
- "ಕೈವಲ್ಯ ನವನೀತ 'ದೇಹದುರ್ಗದಧೀಶ' ಮುದ್ರಿಕೆಯಲ್ಲಿ ಶಿವಶರಣರ ಹಾಡುಗಳ ಮಾದರಿಯಲ್ಲಿ ಹಾಡುಗಳನ್ನು ರಚಿಸಿದ್ದಾನೆ. ೧೮೪೧ರಲ್ಲಿ ಬಳ್ಳಾರಿ ಕರ್ನಾಟಕ ಬುಕ್ ಡಿಪ್ಪೋ ಏಜೆಂಟ್ ಎಸ್.ಕೆ. ಕೃಷ್ಣಸ್ವಾಮಿ ಪ್ರಕಟಿಸಿದ್ದಾರೆ.
- ಕೈವಲ್ಯ ಪದ್ಯಗಳು ತಿಪಟೂರು ತಾಲೂಕಿನ ವೃಷಬೇಂದ್ರಯ್ಯ ಸ್ವಾಮಿಗಳು ಹಾಡಿದ ಹಾಡುಗಳನ್ನು ಒಳಗೊಂಡ ಕೃತಿ. ಶಿವಾನುಭವ ಮಾಸಿಕದಲ್ಲಿ ಪ್ರಕಟಗೊಂಡು ನಂತರದಲ್ಲಿ ಪುಸ್ತಕರೂಪದಲ್ಲಿ ಪ್ರಕಟಗೊಂಡಿವೆ."[೨]
- ಕೈವಲ್ಯ ದರ್ಪಣ: ಇದು ಬಾಲಲೀಲಾ ಮಹಾಂತ ಶಿವಯೋಗಿಗಳ ಸ್ವರವಚನಗಳ ಸಂಗ್ರಹ. ಇವನ್ನು ಗವಿಮಠಾಧ್ಯಕ್ಷ ಶ್ರೀ ಬಸವಲಿಂಗ ಸ್ವಾಮಿಗಳ ೧೯೦೮ರಲ್ಲಿ ಪ್ರಕಟಿಸಿದ್ದಾರೆ. ಏಕೋತ್ತರ ಶತಸ್ಥಲದ ಕೆಲವು

ಹಾಡುಗಳಿಂದ ಒಡಗೂಡಿದ ಸಂಪಾದಿತ ಕೃತಿ ಕೈವಲ್ಯ ಸೋಪಾನ. ಇದನ್ನು ಮುರಿಘಾ ಗುರುಸಿದ್ಧ ದೇಶಿ ಕೇಂದ್ರರು (೧೭೨೦)ರಲ್ಲಿ ಸಂಪಾದಿಸಿದ್ದಾರೆ.

- ಬಿಡಿಸ್ವರ ವಚನಗಳನ್ನು ಅನೇಕ ದೇಸಿ ವಿದ್ವಾಂಸರು ಸಂಪಾದಿಸಿದ್ದಾರೆ. ಅವುಗಳಲ್ಲಿ ಗೌ.ಮ. ಉಮಾಪತಿ ಮಠಮಾನ್ಯಗಳ ಸ್ವಾಮಿಗಳು ಮುಂತಾದವರು.
- ಆಧುನಿಕೋತ್ತರದಲ್ಲಿ ಸ್ವರವಚನಗಳ ಸಂಕಲನ ಮತ್ತು ಸಂಪಾದನೆಯ ದೃಷ್ಟಿಯಿಂದ ವೀರಶೈವ ಮಠಮಾನ್ಯಗಳ ಕೊಡುಗೆ ಅಪಾರವಾದುದು. ಗದುಗಿನ ತೋಂಟದಾರ್ಯ ಮಠ ಹಾಗೂ ಸುತ್ತೂರು ಮಠ, ಮೈಸೂರು ಇವರುಗಳಿಂದ ಅನೇಕ ವೀರಶೈವ ಶರಣರ ಸ್ವರವಚನಗಳು ಪ್ರಕಟಗೊಂಡಿವೆ. ಗದುಗಿನ ತೋಂಟದಾರ್ಯ ಮಠದಿಂದ ಪ್ರಕಟಗೊಂಡ ಸ್ವರವಚನಗಳು ಇಂತಿವೆ.

೧. ಆದಯ್ಯನ ಲಘುಕೃತಿಗಳು, ಸಂ. ಡಾ.ಎಂ.ಎಂ. ಕಲಬುರ್ಗಿ, ೧೯೮೦

೨. ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು, ಸಂ. ಡಾ. ಮಲ್ಲಿಕಾರ್ಜುನ. ಎಂ.ಸಿ. ಲಠ್ಠೆ

೩. ಕೆಸ್ತೂರ ದೇವರ ಸ್ವರವಚನಗಳು, ಡಾ. ಎಂ.ಎಸ್. ಸುಂಕಾಪುರ, ೧೯೮೨

೪. ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳು, ಸಂ. ಶಾಂತರಸ, ೧೯೮೩

೫. ಜುಗುನಿ ಮರುಳದೇವರ ಕೃತಿಗಳು, ಡಾ. ಎಸ್. ವಿದ್ಯಾಶಂಕರ, ೧೯೮೩

೬. ಕಂಬಾಳ ಶಾಂತಮಲ್ಲೇಶನ ಗಣವಚನರತ್ನಾವಳಿ, ಎಸ್. ಉಮಾಪತಿ, ೧೯೮೬

೭. ಶಂಕರದೇವರ ಸ್ವರವಚನಗಳು, ಎಸ್. ಶಿವಣ್ಣ, ೧೯೮೭

೮. ಸ್ವರವಚನ ವಾಹಿನಿ, ಎಸ್. ಉಮಾಪತಿ, ೧೯೯೫, ಮುಂತಾದವು."[೮]

ಹೀಗೆ ಅನೇಕ ಸಂಕಲನಗಳ ಸಂಪಾದೀತ ಕೃತಿಗಳು ಮಠಮಾನ್ಯಗಳಿಂದ ಲಭ್ಯವಾಗಿವೆ. ಎಲ್. ಬಸವರಾಜು ಅವರ ಶಿವದಾಸ ಗೀತಾಂಜಲಿ ಈ ಸಾಲಿನಲ್ಲಿ ಸೇರುವ ಸ್ವರವಚನಗಳ ಸಂಕಲನದಿಂದ ಕೂಡಿದ ವಿಶಿಷ್ಟ ಸಂಪಾದಿತ ಕೃತಿ. ಆದರೆ ಇತರೆ ಸ್ವರವಚನಗಳ ಸಂಪಾದನೆಗಳಿಂದ ಈ ಕೃತಿಯೂ ಭಿನ್ನವಾಗಿ ನಿಲ್ಲುತ್ತದೆ.

**ಕೊನೆ ಟಿಪ್ಪಣಿಗಳು**

೧. ಎಲ್. ಬಸವರಾಜು, ಶಿವದಾಸ ಗೀತಾಂಜಲಿ, ಪು.xv

೨. ಅದೇ, ಪು.೯

೩. ಅದೇ, ಪು.೧೧

೪. ಅದೇ, ಪು.೧೨೮

೫. ಅದೇ, ಪು. ೧೯೧

೬. ಅದೇ, ಪು. ೪೩೪

೭. ಎಂ.ಎಂ. ಕಲಬುರ್ಗಿ, ಸ್ವರವಚನಗಳ ವಿಚಾರ ಸಂಕೀರ್ಣ, ಪು. ೪೮

೮. ಗೌ.ಮ. ಉಮಾಪತಿಶಾಸ್ತ್ರಿ, ಪ್ರಕಟಿತ ಸ್ವರವಚನ ಸಾಹಿತ್ಯ, ಲೇ. ಸ್ವರವಚನ ವಿಚಾರ ಸಂಕೀರ್ಣ, ಪು. ೫೩

# ಪರಾಮರ್ಶನ ಗ್ರಂಥಗಳು


- ಅಂಗಡಿ ಎಸ್.ಎಸ್., ವಚನ ಸಾಹಿತ್ಯ ಭಾಷೆ, ಲಿಂಗಾಯತ ಅಧ್ಯಯನ ಅಕಾಡೆಮಿ, ನಾಗನೂರು. ಶ್ರೀ ರುದ್ರಾಕ್ಷಿ ಮಠ, ಬೆಳಗಾವಿ, ೨೦೦೨
- ಕರಿಬಸವಶಾಸ್ತ್ರಿ ಸಂ., ಶಿವಯೋಗ ಪ್ರದೀಪಿಕೆ, ವೀರಶೈವ ಗ್ರಂಥ ಪ್ರಕಾಶನ, ಮೈಸೂರು, ೧೯೧೩
- ಕುರುವ ಬಸವರಾಜ ಸಂ., ಮುಪ್ಪಿನ ಷಡಕ್ಷರಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೮
- ಕಲಬುರ್ಗಿ ಎಂ.ಎಂ., ಕವಿರಾಜ ಮಾರ್ಗ ಪರಿಸರ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩
- ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟ ೧, ನರೇಶ ಮತ್ತು ಕಂ, ಬೆಂಗಳೂರು, ೧೯೮೮
- ಕಲಬುರ್ಗಿ ಎಂ.ಎಂ., ವೀರಣ್ಣ ರಾಜೂರು, ಸಂ. ಹೊಸ ಕುಮಾರರಾಮನ ಸಾಂಗತ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೦
- ಕಲ್ಗುಡಿ ಬಸವರಾಜ, ಮಧ್ಯಕಾಲೀನ ಭಕ್ತಿಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ೧೯೮೮
- ಚಿದಾನಂದಮೂರ್ತಿ, ವಚನಸಾಹಿತ್ಯ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫
- ಚಿದಾನಂದಮೂರ್ತಿ ಮತ್ತು ಸಿ.ಯು. ಮಂಜುನಾಥ, ಸಂ., ಭೂಷಣ, ಸರ್ಪಭೂಷಣ ಶಿವಯೋಗೀಶ್ವರ ಮಠದ ಟ್ರಸ್ಟ್, ಬೆಂಗಳೂರು, ೧೯೯೯
- ತಿಪ್ಪೇರುದ್ರಸ್ವಾಮಿ ಎಚ್., ಅನುಭಾವ ಸಾಹಿತ್ಯ, ಪಿ.ವಿ.ಕೆ. ಮೂರ್ತಿ, ಮೈಸೂರು, ೧೯೬೮
- ಬಸವನಾಳ ಎಸ್.ಎಸ್., ಸಂ., ವೀರಶೈವ ತತ್ವ ಪ್ರಕಾಶಿಕೆ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೪೧
- ಬಸವರಾಜು ಎಲ್., ಅಲ್ಲಮನ ಮೈಮೇಲೆ ಬಂದಾಗ, ಸಿ.ವಿ.ಜಿ. ಪಬ್ಲಿಕೇಷನ್, ೨೦೦೨
- ಬಸವರಾಜು ಎಲ್., ಸಂ., ಅಲ್ಲಮನ ವಚನ ಚಂದ್ರಿಕೆ, ಲೋಹಿಯಾ ಪ್ರಕಾಶನ, ೨೦೦೧
- ಬಸವರಾಜು ಎಲ್., ಸಂ., ಕನ್ನಡ ಛಂದಸ್ಸಂಪುಟ, ಗೀತಾ ಬುಕ್ ಹೌಸ್, ಮೈಸೂರು, ೧೯೯೬
- ಬಸವರಾಜು ಎಲ್., ಸಂ. ಜಾಲಾರಿ, ವಿದ್ಯಾವರ್ತ ಪ್ರಕಾಶನ, ವಿದ್ಯಾರಣ್ಯ, ಮೈಸೂರು, ೧೯೯೯
- ಬಸವರಾಜು ಎಲ್., ದೇವರ ದಾಸಿಮಯ್ಯನ ವಚನಗಳು, ಗೀತಾ ಬುಕ್ ಹೌಸ್, ಮೈಸೂರು, ೧೯೭೮
- ಬಸವರಾಜು ಎಲ್., ಸಂ., ನಿಜಗುಣ ಶಿವಯೋಗಿಯ ತತ್ವದರ್ಶನ, ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಸಂಸ್ಥಾನ, ಮೈಸೂರು, ೧೯೯೧
- ಬಸವರಾಜ್ ಎಲ್., ಪಂಪ ಪೂರ್ವಯುಗ, ಕನ್ನಡ ಸಾಹಿತ್ಯ ಪ್ರಕಾಶನ, ಬೆಂಗಳೂರು, ೧೯೯೬
- ಬಸವರಾಜು ಎಲ್., ಸಂ., ಪರಮಾರ್ಥ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೦
- ಬಸವರಾಜು ಎಲ್., ಬುದ್ಧ ಚರಿತ್ರೆ, (ಅನು.) ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ, ೧೯೮೮
- ಬಸವರಾಜು ಎಲ್., ಸಂ., ಮಹಾದೇವನ ಮಹಾಲಿಂಗೇಂದ್ರ ವಿಜಯ, ಚಿತ್ರದುರ್ಗ ಬೃಹನ್ಮಠ, ೧೯೭೧

- ಬಸವರಾಜು ಎಲ್., ಶೂನ್ಯ ಸಂಪಾದನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬
- ಬಸವರಾಜು ಎಲ್., ಸಂ., ಶಬ್ದಮಣಿದರ್ಪಣ, ಚಿನ್ಮಾಲಾದ್ರಿ ಪ್ರಕಾಶನ, ಚಿತ್ರದುರ್ಗ, ೧೯೮೬
- ಬಸವರಾಜು ಎಲ್., ಸಂ., ಶಿವದಾಸ ಗೀತಾಂಜಲಿ, ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೧೯೬೩, ೧೯೯೦
- ಬಸವರಾಜು ಎಲ್., ಸಂ., ಸರಳ ಆದಿಪುರಾಣ, ಅಭಿರುಚಿ ಪ್ರಕಾಶನ, ಮೈಸೂರು, ೨೦೦೨
- ಬಸವರಾಜು ಎಲ್., ಸಂ., ಸರಳ ಪಂಪಭಾರತ, ಗೀತಾ ಬುಕ್ ಹೌಸ್, ಮೈಸೂರು, ೧೯೯೯
- ಬಸವರಾಜು ಎಲ್., ಸರಳ ಹರಿಶ್ಚಂದ್ರ ಚಾರಿತ್ರ, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು, ೨೦೦೧
- ಮರುಳಯ್ಯ ಸಾ.ಶಿ., ಸಂ., ವೀರಶೈವ ವಿಚಾರ ಸಂಕಿರಣ, ಶಿವಬಸವ ಸ್ವಾಮಿಗಳ ಕಲ್ಯಾಣ ಕೇಂದ್ರ, ಬೆಂಗಳೂರು, ೧೯೭೬
- ಮುಗಳಿ ರಂ.ಶ್ರೀ., ಕನ್ನಡ ಸಾಹಿತ್ಯ ಚರಿತ್ರೆ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೫೩
- ಮುಗಳಿ ರಂ.ಶ್ರೀ., ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೫
- ಲಠ್ಠೆ ಎಂ.ಎಸ್., ಸಂ., ಕಡಕೋಳ ಮಡಿವಾಳೇಶ್ವರರ ಸ್ವರವಚನಗಳು, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೮೨
- ಲಠ್ಠೆ ಎಂ.ಎಸ್., ಲೇ, ಸ್ವರವಚನ ಒಂದು ವಿವೇಚನೆ, ಅಖಿಲ ಭಾರತ ಶರಣಸಾಹಿತ್ಯ ಪರಿಷತ್ತು, ಮೈಸೂರು, ೨೦೦೦
- ವೀರಣ್ಣ ರಾಜೂರು, ಶಿವಯೋಗ ಪ್ರದೀಪಿಕೆ, ಧಾರವಾಡ ವಿಶ್ವವಿದ್ಯಾಲಯ, ಧಾರವಾಡ, ೧೯೮೧
- ಶಾಂತರಸ ಸಂ., ಕೂಡ್ಲೂರು ಬಸವಲಿಂಗ ಶರಣರ ಸ್ವರವಚನಗಳು, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೮೩
- ಶಿವಾನಂದ ವಿ., ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮
- ಶಿವಾನಂದ ವಿರಕ್ತಮಠ, ವಚನ ಸ್ವರವಚನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೦
- ಶಿವಣ್ಣ ಎಸ್., ಸಂ., ಶಂಕರ ದೇವರ ಸ್ವರ ವಚನಗಳು, ತೋಂಟದಾರ್ಯ ಮಠ, ಗದಗ, ೧೯೮೭
- ಸೀತಾರಾಮಯ್ಯ ಎಂ.ವಿ., ಕವಿರಾಜಮಾರ್ಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೪
- ಸುಂಕಾಪುರ ಎಂ.ಎಸ್., ಸಂ., ಕೆಸ್ತೂರ ದೇವರ ಸ್ವರವಚನಗಳು, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೮೨
- ಹರ್ಡೇಕರ ಮಂಜಪ್ಪ, ಸಂ., ಸುಭೋದಸಾರ, ವೀರಶೈವ ವಿದ್ಯಾಲಯ, ಆಲಮಟ್ಟಿ, ೧೯೪೦
- ಹಳ್ಳಿಕೇರಿ ಎಫ್.ಟಿ., ರವೀಂದ್ರನಾಥ ಕೆ., ಸಿರಿಸಂಪದ, ಬಿ.ವಿ. ಶಿರೂರ ಅಭಿನಂದನ ಗ್ರಂಥ, ೨೦೦೩
- ಹಿರೇಮಠ ಆರ್.ಸಿ. ಸಂ., ಶೂನ್ಯ ಸಂಪಾದನೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೧
- ಹಿರೇಮಠ ಎಸ್.ಎಂ., ವೀರಶೈವ ಸಾಹಿತ್ಯ, ೧೯೪೯, ಚೆನ್ನಬಸವ ಶಿವಾಚಾರ್ಯ ಘನಮಠ, ಹಾರಕೂಡ, ೧೯೯೬

